WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಏಪ್ರಿಲ್ ೧೯, ೨೦೧೨ (ಚೈತ್ರ ೩೦, ಶಕ ವರ್ಷ ೧೯೩೪) | ಸಂಚಿಕೆ ೧೬ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲಸಂಪನ್ಮೂಲ ಸಚಿವಾಲಯ

ವಿಷಯ : ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಕೊಟ್ನಾಳ ಹತ್ತಿರ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

ಓದಲಾಗಿದೆ : 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010, ದಿನಾಂಕ:28–09–2011

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ಕೊಟ್ನಾಳ ಸ.ನೀ. ಕೆರೆ ಸುಧಾರಣೆ/2011–12/553, ದಿನಾಂಕ:01–02–2012.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಕೊಟ್ನಾಳ ಹತ್ತಿರ ಸಣ್ಣ ನೀರಾವರಿ ಕರೆ ಸುಧಾರಣೆ ಕಾಮಗಾರಿಯು 13ನೇ ಹಣಕಾಸು ಆಯೋಗದ ಅನುದಾನದಡಿ ಕೆರೆಗಳ ಹಾಗೂ ಪಾರಂಪರಿಕ ಜಲಕಾಯಗಳ ಪುನರುಜ್ಜೀವನ ಯೋಜನೆಯಡಿ ಉಲ್ಲೇಖ (1)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಅನುಮೋದನೆಗೊಂಡಿರುವ ಕಾಮಗಾರಿಗಳ 2011–12ನೇ ಸಾಲಿನ ಕ್ರಿಯಾ ಯೋಜನೆಯ ಪಟ್ಟಿಯಲ್ಲಿ ಸೇರಿರುತ್ತದೆ. ಈ ಕಾಮಗಾರಿಯ ರೂ.100.00 ಲಕ್ಷಗಳ ಅಂದಾಜು ಪಟ್ಟಿಗೆ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 13–12–2011 |
| ಪ್ರಜಾವಾಣಿ ಕನ್ನಡ ದಿನ ಪತ್ರಿಕೆ | 06–12–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ;23–01–2012ರಂದು ತೆರೆದು ಪರಿಶೀಲಿಸಲಾಗಿರತ್ತದೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.90,89,827/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ಎಸ್.ಕೆ.ಗಾಣಿಗೇರ<br>ಒಂದನೇ ದರ್ಜೆ ಗುತ್ತಿಗೆದಾರರು | 1,01,79,818/– | 11.99<br>ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್.ಕೆ. ಗಾಣಿಗೇರ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.99ರಷ್ಟು ಹೆಚ್ಚಾಗಿದ್ದು,

ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 14–02–2012ರ ಪತ್ರದಲ್ಲಿ ಕಾಮಗಾರಿಯನ್ನು ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತದ ಮೇಲೆ ಶೇ.11.50ರಷ್ಟು ಹೆಚ್ಚಿನ ದರಗಳಿಗೆ ಟೆಂಡರ್‌ನ್ನು ಅನುಮೋದಿಸಲು ಕೋರಿರುತ್ತಾರೆ.

ಈ ಟೆಂಡರ್‌ನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.90,89,827/– ಗಳ ಮೇಲೆ ಶೇ.9.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.99.07,911/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 09 ಕೆಜಿದು 2012 (ತಾಂತ್ರಿಕ) ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಇಂಡಿ ತಾಲ್ಲೂಕಿನ ಕೊಟ್ನಾಳ ಹತ್ತಿರ ಸಣ್ಣ ನೀರಾವರಿ ಕೆರೆ ಸುಧಾರಣೆ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.90,89,827/–ಗಳ ಮೇಲೆ ಶೇ.9.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.99,07,911/– ಗಳಿಗೆ (ರೂ. ತೊಂಭತ್ತೊಂಭತ್ತು ಲಕ್ಷ ಏಳು ಸಾವಿರದ ಒಂಭೈನೂರ ಹನ್ನೊಂದು ಮಾತ್ರ)ಗಳಿಗೆ ಶ್ರೀ ಎಸ್.ಕೆ.ಗಾಣಿಗೇರ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್.750

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

ವಿಷಯ : ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಬಬಲೇಶ್ವರ ಗ್ರಾಮದ ಹತ್ತಿರ ಇಂಗು ಕೆರೆ ಸುಧಾರಣೆ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

ಓದಲಾಗಿದೆ : 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010, ದಿನಾಂಕ:28–09–2011

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ಬಬಲೇಶ್ವರ ಇಂಗು ಕೆರೆ ಸುಧಾರಣೆ/2011–12/556, ದಿನಾಂಕ:01–02 2012.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಬಬಲೇಶ್ವರ ಗ್ರಾಮದ ಹತ್ತಿರ ಇಂಗು ಕರೆ ಸುಧಾರಣೆ ಕಾಮಗಾರಿಯು 13ನೇ ಹಣಕಾಸು ಆಯೋಗದ ಅನುದಾನದಡಿ ಕೆರೆಗಳ ಹಾಗೂ ಪಾರಂಪರಿಕ ಜಲಕಾಯಗಳ ಪುನರುಜ್ಜೀವನ ಯೋಜನೆಯಡಿ ಉಲ್ಲೇಖ (1)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಅನುಮೋದನೆಗೊಂಡಿರುವ ಕಾಮಗಾರಿಗಳ 2011–12ನೇ ಸಾಲಿನ ಕ್ರಿಯಾ ಯೋಜನೆಯ ಪಟ್ಟಿಯಲ್ಲಿ ಸೇರಿರುತ್ತದೆ. ಈ ಕಾಮಗಾರಿಯ ರೂ.62.50 ಲಕ್ಷ ಮೊತ್ತದ ಅಂದಾಜು ಪಟ್ಟಿಗೆ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 13–12–2011 |
| ಕನ್ನಡ ಪ್ರಭ ದಿನ ಪತ್ರಿಕೆ | 13–12–2011 |

ಈ ಟಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ;23–01–2012ರಂದು ತೆರೆದು ಪರಿಶೀಲಿಸಲಾಗಿರುತ್ತದೆ. ವಿವರಗಳು ಕೆಳಕಂಡಂತಿವೆ.

| ಮಂಜೂರಾತಿ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ.58,73,261/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1. | ಬಿ.ಆರ್.ನಂದೆಗೋಳ, ಒಂದನೇ ದರ್ಜೆ ಗುತ್ತಿಗೆದಾರರು | 65,74,811/– | 11.945 ಹೆಚ್ಚು |

ಮೇಲ್ಕಂಡಂತೆ ಶ್ರೀ ಬಿ.ಆರ್.ನಂದೆಗೋಳ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 11.945ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರ್‌ನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ.58,73,261/- ಗಳ ಮೇಲೆ ಶೇ.9.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.64.01,854/-ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 06 ಕೆಜಿದು 2012 (ತಾಂತ್ರಿಕ) ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕಿನ ಬಬಲೇಶ್ವರ ಗ್ರಾಮದ ಹತ್ತಿರ ಇಂಗು ಕೆರೆ ಸುಧಾರಣೆ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ.58,73,261/-ಗಳ ಮೇಲೆ ಶೇ.9.00ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ.64,01,854/- ಗಳಿಗೆ (ರೂ. ಅರವತ್ತನಾಲ್ಕು ಲಕ್ಷ ಒಂದು ಸಾವಿರದ ಎಂಟು ನೂರ ಐವತ್ತನಾಲ್ಕು ಮಾತ್ರ)ಗಳಿಗೆ ಶ್ರೀ ಬಿ.ಆರ್.ನಂದೆಗೋಳ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್.751

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ವಿಷಯ : ಕರ್ನಾಟಕ ಸೊಸೈಟಿಗಳ ನೋಂದಣಿ ಕಾಯ್ದೆ, 1960ರಡಿ ಕರ್ನಾಟಕ ರಾಜ್ಯದಲ್ಲಿ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿ (Karnataka Eco-tourism Development Board) ರಚಿಸುವ ಬಗ್ಗೆ.

ಓದಲಾಗಿದೆ : ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಇವರ ಪತ್ರ ಸಂಖ್ಯೆ: ಡಿ/ಡಬ್ಲ್ಯುಎಲ್/ಸಿಆರ್-59/09-10, ದಿನಾಂಕ:03-03-2010.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 03-03-2010ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ), ಬೆಂಗಳೂರು ಇವರು ಮಧ್ಯಪ್ರದೇಶದಲ್ಲಿ ಪರಿಸರ ಪ್ರವಾಸೋದ್ಯಮ ಮಂಡಳಿ ಹಾಗೂ ಹಿಮಾಚಲ ಪ್ರದೇಶದಲ್ಲಿ ಪರಿಸರ ಪ್ರವಾಸೋದ್ಯಮ ಸೊಸೈಟಿಯನ್ನು ರಚಿಸಿರುವಂತೆ ಕರ್ನಾಟಕ ರಾಜ್ಯದಲ್ಲಿಯೂ ಸಹ ಈ ಕೆಳಕಂಡ ಧ್ಯೇಯೋದ್ದೇಶಗಳನ್ನು ಸಾಧಿಸಲು ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಯನ್ನು ರಚಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

1. ಅರಣ್ಯ ಸಂರಕ್ಷಣೆ ಮತ್ತು ವನ್ಯಜೀವಿ ಸಂರಕ್ಷಣೆ ಕುರಿತು ಜನಸಾಮಾನ್ಯರಲ್ಲಿ, ಮಕ್ಕಳಲ್ಲಿ ವಿಶೇಷವಾಗಿ ಯುವಕರಲ್ಲಿ ಜಾಗೃತಿ ಮೂಡಿಸುವುದು.
2. ದೇಶದಲ್ಲಿ ಅದರಲ್ಲಿಯೂ ವಿಶೇಷವಾಗಿ ಕರ್ನಾಟಕ ರಾಜ್ಯದಲ್ಲಿ ಪ್ರವಾಸೋದ್ಯಮ ಚಟುವಟಿಕೆಗಳನ್ನು ಬಲಪಡಿಸುವುದು ಮತ್ತು ಉತ್ತೇಜನ ನೀಡುವುದು.
3. ಸ್ಥಳೀಯ ಸಮುದಾಯದವರನ್ನು ಪರಿಸರ ಪ್ರವಾಸೋದ್ಯಮದಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವುದು ಹಾಗೂ ಉದ್ಯೋಗಾವಕಾಶ ಕಲ್ಪಿಸಿ ಆರ್ಥಿಕ ಸೌಲಭ್ಯಗಳನ್ನು ಒದಗಿಸುವುದು.
4. ರಾಜ್ಯದಲ್ಲಿ ಪ್ರವಾಸೋದ್ಯಮ ಚಟುವಟಿಕೆಗಳನ್ನು ಜಾರಿಗೊಳಿಸಲು ನೀತಿ, ನಿಯಮಗಳನ್ನು ರೂಪಿಸಲು ಹಾಗೂ ಮಾರ್ಗದರ್ಶನ ಮಾಡಲು ಸಹಕರಿಸುವುದು.
5. ಪರಿಸರ ಪ್ರವಾಸೋದ್ಯಮದ ಪ್ರದೇಶಗಳಲ್ಲಿ ಸಂಶೋಧನೆ ಮತ್ತು ಅದರ ಪರಿಣಾಮಗಳ ಬಗ್ಗೆ ಅಧ್ಯಯನ ಕೈಗೊಳ್ಳುವುದು.
6. ಪರಿಸರ ಪ್ರವಾಸೋದ್ಯಮವನ್ನು ಕರ್ನಾಟಕ ಅರಣ್ಯ ಇಲಾಖೆಯಡಿ ಮುಂಚೂಣಿಗೆ ತಂದು ಸಮೃದ್ಧ ಚಟುವಟಿಕೆಯನ್ನಾಗಿ ಬಲಪಡಿಸುವುದು.
7. ಪರಿಸರ ಪ್ರವಾಸೋದ್ಯಮ ನಡೆಸುವಂತಹ ಸಂಘ ಸಂಸ್ಥೆಗಳು ಉತ್ತಮ ಕಾರ್ಯಕ್ರಮಗಳನ್ನು ಅನುಸರಿಸುವಂತೆ ರೂಪಿಸುವುದು.
8. ಪರಿಸರ ಪ್ರವಾಸೋದ್ಯಮ ನಡೆಸುವ ಸಂಘ ಸಂಸ್ಥೆಗಳನ್ನು ಶ್ರೇಣೀಕೃತಗೊಳಿಸುವುದು.
9. ನಿಸರ್ಗ ಮಾರ್ಗದರ್ಶಕರಿಗೆ ತರಬೇತಿ ಹಾಗೂ ಪ್ರಮಾಣಪತ್ರ ನೀಡುವುದು.
10. ನಿಸರ್ಗ ಶಿಕ್ಷಣ ಮತ್ತು ಪರಿಸರ ಪ್ರವಾಸೋದ್ಯಮ ಉತ್ತೇಜನಗೊಳಿಸಲು ಅಗತ್ಯವಿರುವ ಸಾಹಿತ್ಯ, ವಿದ್ಯುನ್ಮಾನ ಮಾಧ್ಯಮ ಸಾಧನಗಳನ್ನು ಒದಗಿಸುವುದು.
11. ವನ್ಯಜೀವಿ ಸಂರಕ್ಷಣೆಯ ದೃಷ್ಟಿಯಿಂದ ಸಾರ್ವಜನಿಕ ಮತ್ತು ಖಾಸಗಿ ಸಂಸ್ಥೆಗಳೊಂದಿಗೆ ಸಂಪರ್ಕ ಕಲ್ಪಿಸುವುದು.

12. ರಾಷ್ಟ್ರೀಯ/ಅಂತರಾಷ್ಟ್ರೀಯ ಸಂಸ್ಥೆಗಳು, ತಜ್ಞರುಗಳೊಂದಿಗೆ ಮತ್ತು ಧನಸಹಾಯ ಮಾಡುವ ಏಜನ್ಸಿಗಳೊಂದಿಗೆ ಸಮನ್ವಯ ಸಾಧಿಸುವುದು ಮತ್ತು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಅಂತರಾಷ್ಟ್ರೀಯ ಮತ್ತು ಧನಸಹಾಯ ನೀಡುವ ಸಂಸ್ಥೆಗಳಿಂದ ವಂತಿಗೆ ಮತ್ತು ಧನ ಸಹಾಯವನ್ನು ಪಡೆದುಕೊಳ್ಳುವುದು. ಉದ್ಯಾನವನಗಳು ಮತ್ತು ಅರಣ್ಯ ಪ್ರದೇಶದ ಒಳಗಡೆ ಪರಿಸರ ಪ್ರವಾಸೋದ್ಯಮ ಚಟುವಟಿಕೆಗಳನ್ನು ನಡೆಸುವುದು ಮತ್ತು ನಿರ್ವಹಿಸುವುದು.

13. ಸುರಕ್ಷಿತ ಪ್ರದೇಶಗಳಲ್ಲಿ ಟ್ರಕಿಂಗ್ ಹಾಗೂ ವನ್ಯಜೀವಿ ಸಫಾರಿಗಳನ್ನು ಅಭಿವೃದ್ಧಿಪಡಿಸುವುದು.

14. ಕಾನೂನಿನ್ವಯ ಎಲ್ಲೆಲ್ಲಿ ಸಾಧ್ಯವೊ ಅಂತಹ ಕಡೆಗಳಲ್ಲಿ ಖಾಸಗಿ ಸಹಭಾಗಿತ್ವದಲ್ಲಿ ಪರಿಸರ ಪ್ರವಾಸೋದ್ಯಮಕ್ಕೆ ಉತ್ತೇಜನ ನೀಡುವುದು.

15. ಪರಿಸರ ಪ್ರವಾಸೋದ್ಯಮ ಮಂಡಳಿಯ ಚಟುವಟಿಕೆಗಳನ್ನು ನಡೆಸಲು ಕೌಶಲ್ಯ ಹೊಂದಿದ ಸಿಬ್ಬಂದಿಯ ತೊಡಗಿಸುವಿಕೆ/ನೇಮಕ ಮಾಡುವುದು.

16. ಮೇಲಿನ ಉದ್ದೇಶಗಳಿಗೆ ಪೂರಕವಾಗುವಂತಹ ಇನ್ನೂ ಯಾವುದಾದರೂ ಚಟುವಟಿಕೆಗಳಿದ್ದಲ್ಲಿ, ಅಂತಹ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು.

ಅಲ್ಲದೆ, ದೇಶದಲ್ಲಿ ಅರಣ್ಯ ಮತ್ತು ಸಂರಕ್ಷಿತ ಪ್ರದೇಶಗಳಲ್ಲಿ ವನ್ಯಜೀವಿ ಪ್ರವಾಸೋದ್ಯಮ ನೀತಿ ಜಾರಿಗೊಳಿಸಿರುವ ರಾಜ್ಯಗಳಲ್ಲಿ ಕರ್ನಾಟಕ ರಾಜ್ಯದ ಅರಣ್ಯ ಇಲಾಖೆಯೂ ಒಂದಾಗಿದ್ದು, ಪರಿಸರ ಪ್ರವಾಸೋದ್ಯಮ, ಶೈಕ್ಷಣಿಕ ಹಾಗೂ ತಿಳುವಳಿಕೆ ಮೂಡಿಸುವ ಸಾಧನವಾಗಿರುವುದನ್ನು ಮನಗಂಡು ಕೇಂದ್ರ ಸರ್ಕಾರದ ಪರಿಸರ ಮತ್ತು ಅರಣ್ಯ ಸಚಿವಾಲಯ, ಭಾರತ ಸರ್ಕಾರದ ರಾಷ್ಟ್ರೀಯ ವನ್ಯಜೀವಿ ಕ್ರಿಯಾ ಯೋಜನೆಯು "Regulated, low-impact tourism has the potential to be a vital tool as it helps win public support for wildlife conservation" ಎಂದು ಅಭಿಪ್ರಾಯ ನೀಡಿದ್ದು, ಅರಣ್ಯ ಮತ್ತು ವನ್ಯಜೀವಿಗಳ ಸಂರಕ್ಷಣೆಯಲ್ಲಿ ಅಭಿವೃದ್ಧಿ, ರಾಜ್ಯದೊಳಗಿನ ಸ್ಥಳೀಯ ಸಮುದಾಯದವರಿಗೆ ಉದ್ಯೋಗಾವಕಾಶದ ಹೆಚ್ಚಳ, ಸ್ಥಳೀಯ ಸಮುದಾಯಗಳಿಗೆ ಹಾಗು ಅರಣ್ಯ ಮತ್ತು ವನ್ಯಜೀವಿ ಸಂರಕ್ಷಣೆಗೆ ಆರ್ಥಿಕ ಅನುಕೂಲಗಳು ಮತ್ತು ಪ್ರವಾಸೋದ್ಯಮದಿಂದ ರಾಜ್ಯ ಸರ್ಕಾರಕ್ಕೆ ಹೆಚ್ಚಿನ ಪ್ರಮಾಣದಲ್ಲಿ ತೆರಿಗೆ ಸಂಗ್ರಹಣೆಯಾಗುತ್ತಿದೆಯೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಅಲ್ಲದೇ, ರಾಜ್ಯದ ಅರಣ್ಯ ಪ್ರದೇಶದಲ್ಲಿನ ಪರಿಸರ ಪ್ರವಾಸೋದ್ಯಮವನ್ನು ಉತ್ತೇಜಿಸಿ ಅಭಿವೃದ್ಧಿಪಡಿಸಲು ಸ್ಪಷ್ಟವಾದ ನೀತಿ ನಿಯಮಗಳು ಹಾಗೂ ಪರಿಸರ ಪ್ರವಾಸೋದ್ಯಮದಿಂದ ಗಳಿಸುವ ಮೊತ್ತವನ್ನು ಅರಣ್ಯ, ವನ್ಯಜಿವಿ ಸಂರಕ್ಷಣೆ ಹಾಗು ಸ್ಥಳೀಯ ಸಮುದಾಯಗಳಿಗೆ ಬಳಸಿಕೊಳ್ಳುವುದನ್ನು ಖಾತರಿಸಿಪಡಿಸಿಕೊಳ್ಳುವ ನಿಟ್ಟಿನಲ್ಲಿ ಮತ್ತು ಪರಿಸರ ಪ್ರವಾಸೋದ್ಯಮವನ್ನು ಜಾರಿಗೊಳಿಸುವಲ್ಲಿ ತೀವ್ರ ಆಸಕ್ತಿಯನ್ನು ಹೊಂದಿರುವಂತಹ ಸಂಘ ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಲು 'ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿ" ಯನ್ನು ರಚಿಸುವ ಅವಶ್ಯಕತೆಯಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 60 ಎಫ್‌ಡಬ್ಲ್ಯುಎಲ್ 2010, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಪರಿಸರ ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಲು ಹಾಗೂ ನಿಯಂತ್ರಿಸಲು ಸರ್ಕಾರವು "ಕರ್ನಾಟಕ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿ (Karnataka Eco-tourism Development Board)" ಎಂಬ ಸಂಸ್ಥೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಸ್ಥಾಪಿಸಿದೆ.

2 ನೂತನವಾಗಿ ಸ್ಥಾಪಿಸಲಾಗಿರುವ ಈ ಸಂಸ್ಥೆಯ ಚಟುವಟಿಕೆಗಳು ಕರ್ನಾಟಕ ಅರಣ್ಯ ಪ್ರದೇಶದ ವ್ಯಾಪ್ತಿಗೆ ಒಳಪಡುತ್ತದೆ.

3. ಕರ್ನಾಟಕ ಪರಿಸರ ಪ್ರವಾಸೋದ್ಯಮ ಮಂಡಳಿಯ ನಿಯಮ ಮತ್ತು ವಿನಿಯಮಗಳು ಮಾನ್ಯ ಅರಣ್ಯ ಸಚಿವರ ನೇತೃತ್ವದಲ್ಲಿ ಪದನಿಮಿತ್ತ ಅಧಿಕಾರಿಗಳು ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡ ಒಂದು ಆಡಳಿತ ಮಂಡಳಿಯನ್ನು ಹೊಂದಿರುತ್ತದೆ. ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತ ಜೀವಿಶಾಸ್ತ್ರ ಇಲಾಖೆ ಇವರ ನೇತೃತ್ವದಲ್ಲಿ ಪದನಿಮಿತ್ತ ಅಧಿಕಾರಿಗಳನ್ನೊಳಗೊಂಡ ಸರ್ಕಾರದಿಂದ ನೇಮಿಸಲ್ಪಟ್ಟ ಒಂದು ಕಾರ್ಯಕಾರಿ ಸಮಿತಿಯನ್ನು ರಚಿಸಲು ನಿಯಮಗಳಲ್ಲಿ ಅವಕಾಶ ಕಲ್ಪಿಸಿದೆ. ಮಂಡಳಿಯ ಸದಸ್ಯ ಕಾರ್ಯದರ್ಶಿಯು ಅರಣ್ಯ ಇಲಾಖೆಯಿಂದ ನಿಯೋಜಿತ ಅಧಿಕಾರಿಯಾಗಿರುತ್ತಾರೆ. ಸಾಧ್ಯವಾದಷ್ಟು ಮಟ್ಟಿಗೆ ಸಿಬ್ಬಂದಿಯನ್ನು ನಿಯೋಜನೆ ಮೇಲೆ ಪಡೆದುಕೊಳ್ಳತಕ್ಕದ್ದು ಹಾಗೂ ವಾಹನ ಚಾಲಕರು ಮತ್ತು ದಲಾಯತ್ ಮುಂತಾದ ಹುದ್ದೆಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳತಕ್ಕದ್ದು.

4. ಮಂಡಳಿಯು ಆರ್ಥಿಕವಾಗಿ ಸ್ವತಂತ್ರವಾಗಿದ್ದು, ಕೇಂದ್ರ ಸರ್ಕಾರದ ಪ್ರವಾಸೋದ್ಯಮ ಇಲಾಖೆಯಿಂದ, ಸಾರ್ವಜನಿಕ ಮತ್ತು ಖಾಸಗಿ ಪರಿಸರ ಪ್ರವಾಸೋದ್ಯಮ ಸಂಸ್ಥೆಗಳಿಂದ ಧನಸಹಾಯವನ್ನು ಪಡೆಯುವಲ್ಲಿ ಹಾಗೂ ನಿಯಂತ್ರಿಸುವಲ್ಲಿ ಪ್ರಮುಖ ಪಾತ್ರ ವಹಿಸತಕ್ಕದ್ದು. ಸದರಿ ಮಂಡಳಿಯ ನಿಧಿಯ ಮೂಲಗಳು ಈ ಕೆಳಕಂಡವುಗಳನ್ನು ಒಳಗೊಂಡಿರತಕ್ಕದ್ದು:–

ಅ) ರಾಜ್ಯ ಅಥವಾ ಕೇಂದ್ರ ಸರ್ಕಾರಗಳಿಂದ ಸ್ವೀಕರಿಸಲ್ಪಟ್ಟ ಅನುದಾನ

ಆ) ಖಾಸಗಿ ಮತ್ತು ಸಾರ್ವಜನಿಕ ಸಂಸ್ಥೆಗಳಿಗೆ ನೀಡಿದ ಸಲಹೆ/ಸಮಾಲೋಚನೆಗಳಿಂದ ಬಂದ ಧನ ಮತ್ತು ಇತರ ಸೇವೆಗಳನ್ನು ಒದಗಿಸಿರುವುದರಿಂದ ಬಂದ ಧನ.

ಇ) ಯಾವುದೇ ಮೂಲಗಳಿಂದ ಬಂದ ದಾನ ದತ್ತಿಗಳು ಹಾಗೂ ದೇಣಿಗೆ

5. ಸದರಿ ಮಂಡಳಿಯ ಸ್ವರೂಪ, ಆಡಳಿತ ಮಂಡಳಿ ನಿರ್ವಹಿಸಬೇಕಾದ ಕೆಲಸ ಕಾರ್ಯಗಳು, ಹೊಂದಿರುವ ಅಧಿಕಾರಗಳು ಮತ್ತು ಹಣಕಾಸಿನ ಕಾರ್ಯವಿಧಾನ ಮುಂತಾದವುಗಳ ಬಗ್ಗೆ ಪ್ರತ್ಯೇಕವಾಗಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ–1 ಮತ್ತು 2ರಲ್ಲಿ ವಿವರಿಸಿದೆ.

6. ಸದರಿ ಮಂಡಳಿಗೆ ತಗಲುವ ವೆಚ್ಚನ್ನು ಯೋಜನೆ ಲೆಕ್ಕಶೀರ್ಷಿಕೆಯಡಿ ಲಭ್ಯವಿರುವ ಅನುದಾನದಿಂದ ಭರಿಸತಕ್ಕದ್ದು.

7. ಸದರಿ ಪ್ರಸ್ತಾವನೆಗೆ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1255 ವೆಚ್ಚ–5/2011, ದಿನಾಂಕ:01–12–2011ರ ಪ್ರಕಾರ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**Annexure-I to the Government Order No.FEE 60 FWL 2010, Dt:24-02-2012**

**THE KARNATAKA ECO-TOURISM DEVELOPMENT BOARD**

(A Registered Society under the Forest Department, Government of Karnataka)

**MEMORANDUM OF ASSOCIATION**

| | | | |
|---|---|---|---|
| 1.1 | NAME | : | The name of the Society shall be “Karnataka Eco-Tourism Development Board” |
| 1.2 | REGISTERED OFFICE | : | The Registered Office of the Board shall be situated at Bangalore |
| 1.3 | JURISDICTION | : | The activites of the Board shall extend to the entire State of Karnataka |

1.4 OBJECTIVES

1.4.1 To create awareness regarding the conservation of forests and wildlife amongst the people in general and children and youth, in particular

1.4.2 To encourage and promote tourism acitivities in the country in general and the State of Karnataka, in particular.

1.4.3 To encourage local community involvement in eco-toursim and provide greater employment opportunities and economic benefits to the local people.

1.4.4 To assist in formulation of policies, laws and guidelines for organized development of eco-tourism activities in the State.

1.4.5 To conduct research and impact-studies in eco tourism areas.

1.4.6 To promote eco-tourism as a frontline non-consumptive activity of Forest Department.

1.4.7 To develop good practices to be followed by the eco-tourism operators.

1.4.8 To standardize and operate certification of eco-tourism operators.

1.4.9 To train and certify nature guides.

1.4.10 To produce literature and electronic media material required for nature education and eco-tourism promotion.

1.4.11 To facilitate linkages between public and private operators in the casue of conservation of wildlife.

1.4.12 To co-ordinate and liaise with national/international bodies, experts and funding agencies and receive contribution and funds from Government of India, State Government, national and international funding agencies etc.

1.4.13 To encourage local community involvement in eco-tourism.

1.4.14 To maintain and facilitate eco-tourism activities inside the parks and forest areas.

1.4.15 To develop trekking trails and operate wildlife safaris in the “Protected Areas”

1.4.16 To encourage public-private partnerships (PPP) in the areas of eco-tourism, wherever the law permits.

1.4.17 To engage/employ such staff as may be necessary for efficient handling and conduct of business of the Board.

1.4.18 To carry out any other activities in furtherance of the above objectives.

**1.5. GOVERNING BODY:**

1.5.1 The Government of Karnataka shall nominate ex-officio and non-official members to the Governing Body and they shall hold the office during the pleasure of the Government.

**1.6 EXECUTIVE COMMITTEE:**

1.6.1 The Government of Karnataka shall nominate ex-officio members to the Executive Committee to manage affairs of the Board and they shall hold office during the pleasure of the Government.

**1.7 CHIEF EXECUTIVE OFFICER AND AUTHORITY TO CORRESPOND**

1.7.1 The Government shall appoint an Officer, not below the rank of Chief Conservator of Forests, on deputation, from the Karnataka Forest Department, as Chief Executive Officer of the Board, who shall be responsible for the proper management and administration of the affairs of the Board, subject to the superintendence and directions of the Executive Committee.

**Annexure-II to the Government Order No.FEE 60 FWL 2010, Dt:24-02-2012**

2 LIST OF MEMBERS WHO ARE AUTHORISED BY THE GOVERNMENT TO FORM THEMSELVES INTO A SOCIETY CALLED “KARNATAKA ECOTOURISM DEVELOPMENT BOARD IN ACCORDANCE WITH SECTION 5 OF THE KARNATAKA SOCIETIES REGISTRATION ACT, 1960

2.1 – We the undersined being the funding ex-officio members are desirous of forming a Society called “Karnataka Eco-Tourism Devolopment Board” in pursuance of the Memorandum of Association and under the provisions of the Karnataka Societies Registration Act, 1960.

| Sl.No. | Name and address | Occupation | Signature |
|---|---|---|---|
| 1. | Additional Chief Secretary/Principal Secretary<br>Forests, Ecology and Environment Department,<br>Government of Karnataka,<br>M.S. Building, Bangalore-560 001 | Government Service | |

| | | | |
|---|---|---|---|
| 2. | Principal Secretary,<br>Finance Department, Government of Karnataka,<br>Vidhana Soudha, Bangalore-560 001 | Government Service | |
| 3 | Principal Secretary/Secretary,<br>Tourism Department, Government of Karnataka,<br>Vikasa Soudha, Bangalore-560 001 | Government Service | |
| 4. | Principal Secretary/Secretary,<br>Annimal Husbandry and Fisheries Department,<br>Government of Karnatka,<br>Vikasa Soudha, Bangalore-560 001 | Government Service | |
| 5. | Principal Secretary/Secretary,<br>Education Department (Primary and Secondary Education)<br>Government of Karnataka,<br>M.S.Building, Bangalore | Government Service | |
| 6. | Principal Secretary/Secretary,<br>Youth Services Department, Government of Karnataka,<br>M.S.Building, Bangalore-560 001 | Government Service | |
| 7. | Principal Chief Conservator of Forests<br>(Head of Forest Force) Aranya Bhavan, 18th Cross,<br>Malleshwaram, Bangalore-560 003 | Government Service | |
| 8. | Principal Chief Conservator of Forests<br>(Wild-Life)<br>Aranya Bhavan, 18th Corss,<br>Malleshwaram, Bangalore-560 003 | Government Service | |

WITNESSES:

We know the above singnatories and they have signed in our presence.

3. RULES AND REGULATIONS OF THE KARNATAKA ECO-TOURISM DEVELOPMENT BOARD (Articles of Association)

3.1- SHORT TITLE

These Rules may be called "The Karnataka Eco-Tourism Development Board" Rules and Regulations

3.2- APPLICABLITY:

These Rules shall come into force from the date on which the Karnataka Eco-Tourism Development Board is registered under the Karnataka Societies Registration Act, 1960

3.3- DEFINITIONS:

In these Rules, the following expressions shall have the meaning as indicated below, unless the context otherwise requires.

3.3.1. -"Act or Rules shall mean the Karnataka Societies Registration Act, 1960 and Rules made there under.

3.3.2 –"Board" shall mean the Karnataka Eco-Tourism Development Board, Bangalore.

3.3.3 –President" means the President of the Governing Body of the Karnataka Eco-Tourism Board.

3.3.4 –"Chief Executive Officer" means the Officer appointed by the Government as the Chief Executive officer of the Karnataka Eco-Tourism Development Board.

3.3.5 –"Executive Committee" means the Committee, which is nominated by the Government to manage affairs of the Board.

3.3.6 –"Government" means the Government of Karnataka

3.3.7 –"Governing Body" consists of the members nominated by the Government as per the G.O.No:FEE 60 FWL 2010, Dt:24-02-2012.

3.3.8 –"Member" means the members of the Governing Body or the Members of the Executive Committee of the Board, as the context requires.

3.3.9 –"Chairperson" means the Chairperson of the Executive Committee.

3.3.10 –"Registrar" means any of the officer of the Government of Karnataka authorised to exercise the powers of the Registrar of Societies, under whose jurisdiction the Board is registered.

3.3.11 –"State" means the State of Karnataka.

3.3.12 –"Year" means twelve calendar months starting April to March of the succeeding year.

4. ADMISSION OF MEMBERS:

4.1. The Governing Body may admit individuals, any company either private or public or both or any corporation or financial institutions or NGOs, who are all interested in the objectives of the Board on such conditions including subscription, donation, grant and endowment as specified by the Governing Body.

4.2. The Governing Body may terminate membership of any member who fails to pay the subscription prescribed or fails to comply with any condition laid down or any cause like insolvency, moral turpitude, conviction for any criminal offence or for unsound mind.

4.3. Any member so terminated may be readmitted on fulfillment of such conditions that the Governing body may stipulate.

4.4. Non-official members are nominated for a period of 2 years. After expiry of 2 years in office, they shall be deemed to have vacated their offices.

4.5. A non-official member may resign from the membership of the Governing Body during his tenure by tendering resignation letter to the Government.

4.6. The Governing Body may have the right to co-opt any eminent personalities as co-opted members and such co-opted members shall not have any right to vote in the Annual General or Special General Body meetings.

5. MEMBERSHIP OF THE GOVERNING BODY:

5.1 – The Government of Karnataka has nominated the following as the Members of the Governing Body

| | | |
|---|---|---|
| EX-OFFICIO MEMBERS | | |
| 1. | Honorable Minister for Forests<br>Government of Karnataka,<br>Vidhana Soudha,<br>Bangalore-560 001. | President |
| 2. | Additional Chief Secretary/Principal Secretary,<br>Forests, Ecology and Environment Department,<br>Government of Karnataka,<br>Bangalore-560 001 | Memeber |
| 3. | Principal Secretary,<br>Finance Department,<br>Government of Karnataka,<br>Bangalore-560 001. | Member |
| 4. | Principal Secretary/Secretary<br>Tourism Department,<br>Government of Karnataka,<br>Bangalore-560 001 | Member |
| 6. | Principal Secretary/Secretary<br>Youth service Department,<br>Bangalore | Member |
| 7. | Principal Secretary/Secretary<br>Education Department (Primary and Secondary Education),<br>Government of Karnataka,<br>Bangalore-560 001. | Member |
| 8. | Principal Secretary,<br>Major Irrigation Department,<br>Government of Karnataka<br>Bangalore | Member |
| 9. | Principal Secretary/Secretary,<br>Minor Irrigation Department<br>Government of Karnataka,<br>Bangalore | Member |
| 10. | Principal Secretary/Secretary<br>Horticulture Department,<br>Government of Karnataka | Member |
| 11. | Principal Chief Conservator of Forests (Head of Forest Force)<br>Aranya Bhavan, 18th Cross, Malleswaram,<br>Bangalore- 560 003 | Member |

| | | |
|---|---|---|
| 12. | Principal Chief Conservator of Forests,<br>(Wildlife) Aranya Bhavan,<br>18th Cross, Malleswaram,<br>Bangalore-560 003 | Member |
| 13. | Chief Executive Officer | Member Secretary |
| | NON OFFICIAL MEMBER | Member |
| 14. | President (or his nominee)<br>Karnataka Tourism Forum,<br>Bangalore | |
| 15. | Secretay (or his nominee)<br>Eco-tourism Society of India | Member |
| 16. | Preisident (or his nominee)<br>Wild Life Association of South India,<br>Bangalore | Member |
| 17. | President (or his nominee)<br>Adventure Tour Operators of India<br>New Delhi | Member |
| 18. | Two Prominent Wildlife NGO's<br>(Nominated by the State Government) | Members |

5.2 – The Government may reconstitute the Governing Body from time to time.

5.3 – No member of the Governing Body shall have any person claim on any immovable or movable properties of the Board or to make any profits whatsoever by virtue of the membership

6. POWERS AND FUNCTIONS OF THE GOVERNING BODY

6.1 – The Governing Body shall formulate the objectives, policies and take decisions in accordance with the Memorandum of Association and the rules and regulations.

6.2 – Approve the annual accounts of income and expenditure of the Board.

6.3- Make Bye-laws, not inconsistent with the rules and regulations.

6.4- The Governing Body may do all such acts, deeds matters and things as are incidental or conducive to the attainment of the objective specified in the Memorandum of Association

7. MEETINGS OF THE GOVERNING BODY:

7.1 The President shall preside over the meetings of the Governing Body.

7.2 The Board shall hold every year a general body meeting at which the report of the management of the Board for the previous year together with an audited copy of the balance sheet, income and expenditure statements and the auditor's report shall be placed before the general body for approval.

7.3 The first annual general body meeting shall be held by the Board within 18 months of its registration. The next annual general body meeting of the Board shall be held within 9 months after the expiry of the year in which the first annual general body meetings was held; and thereafter an annual general body meeting shall be held within 9 months after the expiry of each year.

7.4 A special general body meeting may be convened at any time on the requisition of the President of the Governing body or on the requisition of not less than one third of the number of members of the Governing body who shall state in writing the purpose for which they wish the meeting to be convened and the Chief Excutive Officer shall within 10 days from the date of receipt of such requisition proceed duly to call a meeting for consideration of purpose.

7.5. Notice of not less than 21 days shall be given in writing to all members of the Governing Body for every general body meeting.

7.6 No business shall be transacted at any general body meeting unless the required quorum is present. The quorum shall not be less than one third of the total number of members of the Governing body.

7.7 If no quorum is present within 30 minutes from the time appointed for the general body meeting, the meeting shall stand adjourned to the same day at any convenient time. For the adjourned meeting, there is no need to issue a separate meeting notice. For such adjourned meeting, no quorum shall be necessary and the members present may deliberate for which the meeting was originally called for.

7.8 Every motion submitted to a general body meeting shall be decided by show of hands and in case of equality of votes; the President shall have a casting vote in addition to the vote to which he is entitled to as a member. Every member shall have one vote. The President shall be the absolute authority to count and judge the validity of votes in any General or Special General Body Meetings.

7.9 At any general body meeting, a declaration by the President that a resolution has been carried or not carried by a particular majority and an entry to that effect in the minute book shall be conclusive evidence of the fact.

8. EXECUTIVE COMMITTEE

8.1-The following are the members of the Executive Committee.

| | | |
|---|---|---|
| 1. | Additional Chief Secretary/Principal Secretary, Forests, Ecology and Environment Department, Government of Karnataka, Bangalore-560 001 | Chair-person |
| 2. | Principal Secretary/Secretary Tourism Department, Government of Karnataka, Bangalore-560 001. | Member |
| 3. | Principal Chief Conservator of Forests (Head of Forest Force) Aranya Bhavan, 18th Cross, Malleswaram, Bangalore- 560 003 | Member |
| 4. | Principal Chief Conservator of Forests, (Wildlife) Aranya Bhavan, 18th Cross, Malleswaram, Bangalore-560 003 | Member |
| 5. | Secretary, Finance Department (Budget & Resources), Government of Karnataka, Bangalore | Member |
| 6. | Principal Secretary, Major Irrigation Department, Government of Karnataka Bangalore | Member |
| 7. | Principal Secretary/Secretary, Minor Irrigation Department Government of Karnataka, Bangalore | Member |
| 8. | Director, Tourism Department, Khanija Bhavan, Bangalore. | Member |
| 9. | Managing Director, Jungle Lodges & Resorts Ltd., Bangalore | Member |
| 10. | Director, Fisheries Department, Bangalore | Member |
| 11. | Director, Institute of Hotel Management Bangalore | Member |
| 12. | Director, Horticulture Department Bangalore | Member |
| 13. | Managing Director, (or his nominee) Karnataka Power Corporation Ltd., Bangalore | Member |
| 14. | Chief Executive Officer | Member Secretary |

9. POWERS AND DUTIES OF THE EXECUTIVE COMMITTEE:

9.1 The Executive Committee shall have powers to add new rules, frame new regulations, amend the existing rules and regulations, and delegate the powers to the Chief Executive Officer for proper functioning of the Board

9.2 The Executive Committee may constitute committees, sub-committes, advisory bodies for such purposes and for such periods as are necessary from time to time for any objectives, purposes or functions of the Board.

9.3 The Executive Committee shall approve the Annual Plan of Operations of the Board prepared by the Chief Executive Officer. The Executive Committee shal reiveiw the programmes and the activities of the Board.

9.4 The Executive Committee may invite any specialists/organizations to attend the meetings of the Executive Committee. Such invitee or invitees shall not be entitled to vote.

9.5 The Executive Committee may provide grants, subsidies and finances to individuals, institutions, agencies, Government Departments, Universities, Non-Governmental Organizations and agencies needing such assistance for such programmes as are related to the objectives of the Board.

9.6 No member of the Executive Committee shall have any personal claim on any immovable or movable properties of the Board or to make any profits whatsoever by virtue of the membership.

9.7 The Executive Committee may do all such acts, deeds, matters and things as are incidental or conducive to the attainment of the objectives specified in the Memorandum of Association.

10. MEETINGS OF THE EXECUTIVE COMMITTEE

10.1 A meeting of the Execuitve Committee shall be held at least once in a quarter with the prior approval of the Chairperson.

10.2 The Chairperson shall preside over meetings of the Executive Committee. Each member of the Executive Committee including the Chairperson shall have one vote. Every motion submitted to the Executive Committee meeting shall be decided by show of hands and in case of equality of votes, the Chairperson shall have a casting vote in addition to the vote to which he is entitled as a member. The Chairperson shall be the absolute authority to count and judge the validity of the votes in Executive Committee meetings.

10.3 The Chief Executive Officer shall cause minutes of every meeting of the Executive committee to be entered in a register and duly signed by the Chairperson and it shall be kept in the custody of the Chief Executive Officer.

11. THE POWERS AND DUTIES OF THE CHIEF EXECUTIVE OFFICER:

11.1 The Chief Executive officer is authorized to correspond with the Register of Co-operative Societies, Bangalore and he is the ex-officio Member-Secretary of the General Body and the Executive Committee.

11.2 The Chief Executive Officer shall have such powers as may be delegated for the management of the affairs of the Authority as in the Memorandum of Association and the rules as decided by the Executive Committee.

11.3 All communications with regard to the affairs of the Authority shall be addressed to the Chief Executive Officer of the Authority only.

11.4 The Chief Executive Officer shall convene the meetings of the Executive Committee, Annual General Body Meetings and any Special General Body Meetings of the Authority, prepare minutes and circlulate them among members and others.

11.5 Every year, the Chief Executive Officer shall prepare the Annual Plan of Operations for the Board based on the policies and decisions of the General Body and the directions of the Executive Committee.

11.6 The Chief Executive Officer shall assign duties to all office and field staff of the Board and shall exercise supervisory and disciplinary control over them.

11.7 The Chief Executive Officer shall attend to all the statutory requirements of the Board and shall have Board to institute or defend legal suits, legal proceedings or actions of the Board.

11.8 The Chief Executive Officer shall be responsible for the finances and accounts of the Board. He shall be responsible for the passing bills, payments to be made or to receive on behalf of the Board.

11.9 The Chief Executive Officer may attend / organize meetings, workshops, seminars, conferences and congress with regard to conservation, utilization and development of medicinal and aromatic plants within India

11.10 The Chief Executive Officer shall take prior permission from the Government before undertaking any tours outside the country.

11.11 The Chief Executive Officer may invite any specialists / organizations to attend the general, special meetings of the Board and the Executive Committee. Such invitee or invitees shall not be entitled to vote.

11.12 The Chief Executive Officer shall file a copy of the balance sheet together with a copy of the receipts and payments accounts duly audited and approved at the general meeting together with a list of names, addresses and occupations of the members of the General Body, with the Registrar of Co-operative Societies, within 14 days of holding the general meeting, as required under Section 13 of the Act.

11.13 The Chief Executive Officer may do all such acts and things as are incidental or conducive to the attainment of the objectives of the Board.

12. ACCOUNTS AND AUDIT:

12.1 The management of funds and properties, movable and immovable of the Board shall be vested in the Chief Executive Officer.

12.2 The funs of the Board shall consist of the following:

a) Grants received from State or Central Government

b) Money received for providing various consultancy & other services to private & public organizations.

c) Any donations and gifts from source.

12.3 The Chief Executive Officer shall keep at the registered office, proper books of accounts with respect to all money received and expended and matters in respect of which receipt and expenditures take place and with respect to all sales and purchases of goods by Board, its assets and liabilities as required by the Act.

12.4 The accounts of the Board shall be audited every year by a Chartered Accountant appointed for the purpose.

13. LEGAL PROCEEDINGS

13.1 The Board may sue or be sued in the name of the Chief Executive Officer only.

13.2 The Chief Executive Officer only shall sign all contracts and assurance of property made on behalf the Board.

13.3 Any amendment, alteration or change in the Memorandum of Association or rules and regulations of the Board shall be in conformity with the provisions of Section 9 and 10 of the Board.

13.4 In the event of any proposal for amalgamation or dissolution of the Board being effected, it shall be with the prior consent of the State Government and in conformity with the provisions of the Sections 21 to 23 of the Act.

13.5 For any acts, matters and things, which have not been specifically, provided for in these rules, the provisions of the Act and Rules framed thereunder shall apply.

13.6 The Chief Executive Officer shall engage the services of legal practitioners to deal with any of the court/tribunal cases pertaining to the Board.

14. FINANCIAL YEAR

14.1 The financial year of the Board shall be from 1st April to 31st March of the following year.

15. WORKING HOURS:

15.1 The working hours of the Board shall be decided by the Executive Committee.

16. INDEMNITY

16.1 Any act or things committed or done by a member or any official of the Board in performance of the duties assigned to him, if accepted by the the Governing body, shall be deemed to have been done in good faith.

**UMADEVI**
Under Secretary to Government
Forest, Ecology & Environment Department

ಪಿ.ಆರ್.752

## ಕಂದಾಯ ಸಚಿವಾಲಯ

ವಿಷಯ : ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಉಪಯೋಗಕ್ಕಾಗಿ ವಾಹನಗಳನ್ನು ಖರೀದಿಸುವ ಕುರಿತು–ಆದೇಶ.

ಓದಲಾಗಿದೆ : ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ:ಉಗ್ರಾಣ 34/2010–11, ದಿನಾಂಕ:20–12–2011

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರ ಕಛೇರಿ ಹಾಗೂ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಗಳಿಗೆ 1992–93ನೇ ಸಾಲಿನಲ್ಲಿ ವಾಹನಗಳನ್ನು ಖರೀದಿಸಲಾಗಿದ್ದು, ಸದರಿ ವಾಹನಗಳು 15 ವರ್ಷಕ್ಕಿಂತಲೂ ಹೆಚ್ಚಿನ ಅವಧಿಗೆ ಕಾರ್ಯನಿರ್ವಹಿಸಿ ಕೆಲವು ವಾಹನಗಳನ್ನು ಅನುಪಯುಕ್ತಗೊಳಿಸಲಾಗಿದೆ. ಉಳಿದ ವಾಹನಗಳು ಸಹ ಹಳೆಯದಾಗಿದ್ದು, ಅವುಗಳ ನಿರ್ವಹಣೆ, ಇಂಧನ ವೆಚ್ಚ ಮತ್ತು ದುರಸ್ಥಿ ವೆಚ್ಚಗಳು ಹೆಚ್ಚಾಗಿರುತ್ತದೆ. ಸರ್ಕಾರದ ಆದೇಶದನ್ವಯ ಇಲಾಖೆಯ ಉಪಯೋಗಕ್ಕಾಗಿ ಹೊರಗುತ್ತಿಗೆ ಮೂಲಕ 15 ವಾಹನಗಳನ್ನು ಪಡೆಯಲಾಗಿದ್ದು, ವಾಹನದ ಮಾಲೀಕರು ಪ್ರಸ್ತುತ ನೀಡುತ್ತಿರುವ ಬಾಡಿಗೆ ದರಗಳು ಕಡಿಮೆಯಾಗಿದೆ ಎಂದು ತಿಳಿಸುತ್ತಾ, ಹೊರಗುತ್ತಿಗೆ ವಾಹನಗಳನ್ನು ಹಿಂದಿರುಗಿಸುವಂತೆ ಕೋರಿರುತ್ತಾರೆ. ವಾಹನಗಳ ಇಂಧನ ವೆಚ್ಚ, ಬಾಡಿಗೆ ಮತ್ತು ದುರಸ್ಥಿ ವೆಚ್ಚವನ್ನು ತಗ್ಗಿಸಲು ಹಾಗೂ ಇಲಾಖೆಯ ಸಾಮರ್ಥ್ಯ ಹೆಚ್ಚಿಸಿ ರಾಜಸ್ವ ಸಂಗ್ರಹಣೆಯಲ್ಲಿ ಸಾಧನೆ ಮಾಡಲು, ಈ ಎಲ್ಲಾ ಕಾರಣಗಳಿಂದ ಹೊಸದಾಗಿ ವಾಹನಗಳನ್ನು ಖರೀದಿಸುವುದು ಅವಶ್ಯಕವಾಗಿರುತ್ತದೆ. ಸದರಿ ವೆಚ್ಚವನ್ನು ಇಲಾಖೆಯ ಲೆಕ್ಕ ಶೀರ್ಷಿಕೆ 20302–01–102–0–00–015– ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪೂರಕ ವೆಚ್ಚದ ಲೆಕ್ಕ ಶೀರ್ಷಿಕೆ ರಲ್ಲಿ 50.00 ಲಕ್ಷಗಳ ಅನುದಾನವನ್ನು ಸಾರಿಗೆ ವೆಚ್ಚ ಲೆಕ್ಕ ಶೀರ್ಷಿಕೆ 2030–03–001–1–00–195ಗೆ ಪುನರ್ ವಿನಿಯೋಗಿಸಿಕೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಮತ್ತು ಇಲಾಖೆಗೆ ಈ ಕೆಳಕಂಡಂತೆ ವಾಹನಗಳನ್ನು ಖರೀದಿಸಲು ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

| | | |
|---|---|---|
| 1. | ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಉಪಯೋಗಕ್ಕಾಗಿ | 1 ಸಂಖ್ಯೆ (Innova 2.5GX(M)) |
| 2. | ಉಪ ನೋಂದಣಿ ಮಹಾಪರಿವೀಕ್ಷಕರು | 1 ಸಂಖ್ಯೆ (ಮಾರುತಿ SX4) |
| 3. | ಜಿಲ್ಲಾ ನೋಂದಣಾಧಿಕಾರಿಗಳಿಗೆ | 8 ಸಂಖ್ಯೆ (Suzuki Dezire LXI MPI) |

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 198 ಮುನೋಸ 2011, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಯು ಉಪಯೋಗಕ್ಕಾಗಿ 10(ಹತ್ತು) ಹೊಸ ವಾಹನಗಳನ್ನು ಖರೀದಿಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ. ವಾಹನಗಳನ್ನು ಖರೀದಿಸಲು ಈ ಕೆಳಕಾಣಿಸಿದಂತೆ ಕ್ರಮ ವಹಿಸಲು ತಿಳಿಸಲಾಗಿದೆ:–

1. ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ಇನ್ನೋವ (Innova 2.5GX(M) ಕಾರ್‌ನ್ನು ಖರೀದಿಸಲು ಸರ್ಕಾರದ ಒಪ್ಪಿಗೆ ಇರುವುದಿಲ್ಲ;
2. ಹೊಸ ವಾಹನಗಳನ್ನು ಖರೀದಿಸಿದ ನಂತರ ಈ ಹಿಂದೆ ಸರ್ಕಾರದ ಆದೇಶ ಸಂಖ್ಯೆ:ಕಂಇ 85 ಮುನೋಸೆ 2011 ದಿನಾಂಕ: 30–7–2011ರಲ್ಲಿನ ಆದೇಶದ ಮೇರೆಗೆ ಇಲಾಖೆಯು ಹೊರಗುತ್ತಿಗೆ ಆಧಾರದ ಮೇಲೆ ಪಡೆದಿರುವ 10 ಖಾಸಗಿ ವಾಹನಗಳನ್ನು ಹಿಂದಿರುಗಿಸುವುದು.
3. ಇಲಾಖೆಯಲ್ಲಿನ 10 ಹಳೆಯ ವಾಹನಗಳನ್ನು ನಿಯಮಾನುಸಾರ ಪ್ರಾದೇಶಿಕ ಆಯುಕ್ತರವರ ವರದಿ ಪಡೆದು ವಿಲೇಗೊಳಿಸುವುದು.
4. ಹೊಸ ವಾಹನಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಆದೇಶ ಸಂಖ್ಯೆ:ಸಿಆಸುಇ 134 ಶಿವಾನೀ 2006 ದಿನಾಂಕ: 25–11–2006ರಲ್ಲಿ ನಿಗದಿಪಡಿಸಿದ ಮೌಲ್ಯದ ಮಿತಿಯೊಳಗೆ ಖರೀದಿಸಬೇಕು.
5. ಇಲಾಖೆಗೆ ನಿಗಧಿಪಡಿಸಿದ ಅನುದಾನದಿಂದಲೇ ವೆಚ್ಚವನ್ನು ಭರಿಸಿಕೊಳ್ಳಬೇಕು ಹಾಗೂ ಹೆಚ್ಚುವರಿ ಅನುದಾನವನ್ನು ಕೋರಬಾರದು.

ಈ ವೆಚ್ಚನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪೂರಕ ವೆಚ್ಚ ಲೆಕ್ಕ ಶೀರ್ಷಿಕೆ 2030-01-102-0-00-015 ರಲ್ಲಿರುವ ರೂ.50.00 ಲಕ್ಷಗಳ ಅನುದಾನವನ್ನು ಸಾರಿಗೆ ವೆಚ್ಚ ಲೆಕ್ಕ ಶೀರ್ಷಿಕೆ 2030–03–001–1–00–195ಗೆ ಮರುಹೊಂದಾಣಿಕೆ ಮಾಡಿಕೊಂಡು ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ:14–02–2012ರ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 31 ವೆಚ್ಚ–7/2012 ದಿನಾಂಕ:14–02–2012ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ.ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.753

## ಕಂದಾಯ ಸಚಿವಾಲಯ

ವಿಷಯ : ಶ್ರೀ ಭೋಜ್ಯಾ ನಾಯ್ಕ್, ಹಿಂದಿನ ಕೇಂದ್ರಸ್ಥಾನ ಉಪ ನೋಂದಣಾಧಿಕಾರಿ, ಹಾಲಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಆಡಳಿತ), ಕೇಂದ್ರ ಕಛೇರಿ, ಬೆಂಗಳೂರು ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸುವ ಕುರಿತು–ಆದೇಶ.

ಓದಲಾಗಿದೆ :
1) ಉಪ ಲೋಕಾಯುಕ್ತರವರ ವರದಿ ಸಂಖ್ಯೆ: COMPT/UPLOK/BCD 208/2001-02/ARE-3 ದಿನಾಂಕ:23–5–2005 ಮತ್ತು 25–04–2006.
2) ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಮುನೋಸೇ(1) 2005, ದಿನಾಂಕ:28–02–2006.
3) ಕರ್ನಾಟಕ ಉಪ ಲೋಕಾಯುಕ್ತ ಇವರ ಅ.ಸ.ಪತ್ರ ಸಂಖ್ಯೆ: COMPT/UPLOK/BCD 208/2001-02/ARE-3 ದಿನಾಂಕ:25–4–2006
4) ಸರ್ಕಾರದ ಆದೇಶ ಸಂಖ್ಯೆ: ಕಂಇ 150 ಮುನೋಮು 2006, ದಿನಾಂಕ:16–05–2007.
5) ಸರ್ಕಾರಿ ಆದೇಶ ಸಂಖ್ಯೆ: ಕಂಇ 150 ಮುನೋಮು 2006, ದಿನಾಂಕ:16–03–2009
6) ವಿಚಾರಣಾಧಿಕಾರಿಯವರ ವರದಿ ದಿನಾಂಕ:13–09–2010.

**ಪ್ರಸ್ತಾವನೆ :**

ಮೇಲೆ ಓದಲಾದ (1) ಉಪ ಲೋಕಾಯುಕ್ತ, ಕರ್ನಾಟಕ, ಬೆಂಗಳೂರು ಇವರ ವರದಿಯಲ್ಲಿ ಶ್ರೀ ಭೋಜ್ಯಾ ನಾಯ್ಕ್, ಹಿಂದಿನ ಕೇಂದ್ರಸ್ಥಾನಿಕ ಉಪ ನೋಂದಣಾಧಿಕಾರಿಯಾಗಿ ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀಮತಿ ರೂಪಾದೇವಿ ಹಾಗೂ ಶ್ರೀ ಲೋಕೇಶ್ ಇವರುಗಳು ದಿನಾಂಕ:26–02–2005 ರಂದು ವಿವಾಹ ಕಾಯಿದೆ, 1955ರಡಿ ವಿವಾಹವಾಗಿದ್ದು, ನೋಂದಣಿ ಸಂಖ್ಯೆ:66/2005ರಲ್ಲಿ ನೋಂದಣಿಯಾಗಿದ್ದು, ತದನಂತರ ದಿನಾಂಕ:03–03–2005ರಂದು ವಿವಾಹ ರದ್ಧಿಯಾತಿ ದಸ್ತಾವೇಜನ್ನು ನೋಂದಣಿ ಸಂಖ್ಯೆ 628/2005 ರದ್ದುಗೊಳಿಸಿ ಅದೇ ಕಛೇರಿಯಲ್ಲಿ ನೋಂದಾಯಿಸಲಾಗಿದೆ. ನೋಂದಣಿ ನಿಯಮಗಳು 1965ರ ನಿಯಮ 123ರ ಪ್ರಕಾರ ಸ್ಥಿರಾಸ್ತಿ ದಸ್ತಾವೇಜುಗಳನ್ನು ಮಾತ್ರ ರದ್ದುಪಡಿಸಲು ಅವಕಾಶವಿದೆಯೇ ವಿನಃ ಹಿಂದೂ ವಿವಾಹ ಕಾಯಿದೆ ಅಡಿ ನೋಂದಾಣಿ ಮಾಡಲಾದ ದಸ್ತಾವೇಜನ್ನು ರದ್ದುಪಡಿಸಲು ನೋಂದಣಾಧಿಕಾರಿಗಳಿಗೆ ಯಾವುದೇ ಅಧಿಕಾರವಿರುವುದಿಲ್ಲ. ಹಿಂದೂ ವಿವಾಹ ಕಾಯ್ದೆ ಅಡಿ ನೋಂದಣಿಯಾದ ದಸ್ತಾವೇಜು ವಿವಾಹ ವಿಚ್ಛೇದನದ ಮೂಲಕ ಅಂದರೆ ಕೌಟುಂಬಿಕ ನ್ಯಾಯಾಲಯ ತೀರ್ಮಾನದನ್ವಯ ರದ್ದಾಗಲು ಸಾಧ್ಯ. ವಸ್ತುಸ್ಥಿತಿ ಹೀಗಿರುವಾಗ ಶ್ರೀ ಭೋಜ್ಯಾ ನಾಯ್ಕ ಇವರು ತಮ್ಮ ಅಧಿಕಾರ ವ್ಯಾಪ್ತಿ ಮೀರಿ ವಿವಾಹ ರದಿಯಾತಿ ದಸ್ತಾವೇಜನ್ನು ನೋಂದಾಯಿಸಿರುತ್ತಾರೆ. ಈ ಮೂಲಕ ಸದರಿ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಮಯಗಳು, 1966ರ ನಿಯಮ 3ನ್ನು ಉಲ್ಲಂಘಿಸುವ ಮೂಲಕ ದುರ್ನಡತೆ ಎಸಗಿರುವುದು ಸಾಬೀತಾಗಿದೆ. ಇದರಿಂದಾಗಿ ಮೇಲೆ ಓದಲಾದ (1)ರ ದಿನಾಂಕ:23–05–2005 ಮಾನ್ಯ ಉಪ ಲೋಕಾಯುಕ್ತರವು ಸರ್ಕಾರಕ್ಕೆ ವರದಿ ಸಲ್ಲಿಸಿ ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ಅನುಚ್ಛೇದ 12(3)ರಡಿ ಶ್ರೀ ಭೋಜ್ಯಾ ನಾಯಕ್, ಕೇಂದ್ರಸ್ಥಾನ ಉಪ ನೋಂದಣಾಧಿಕಾರಿ ಇವರು ಅಧಿಕಾರ ವ್ಯಾಪ್ತಿ ಮೀರಿ ವಿವಾಹ ನೋಂದಣಿ ರದ್ಧತಿ ದಸ್ತಾವೇಜನ್ನು ರೂ.10,000/–ಲಂಚ ಪಡೆಯುವ ಮೂಲಕ ನೋಂದಾಯಿಸಿ ಕರ್ತವ್ಯ ಚ್ಯುತಿ ಎಸಗಿರುತ್ತಾರೆ ಎಂದು ತಿಳಿಸಿ ಸರ್ಕಾರಕ್ಕೆ ವರದಿ ಸಲ್ಲಿಸಿ, ಪ್ರಕರಣದ ಕುರಿತು ಸರ್ಕಾರ ಕೈಗೊಂಡ ಕ್ರಮದ ಬಗ್ಗೆ ವರದಿ ನೀಡುವಂತೆ ತಿಳಿಸಿರುತ್ತಾರೆ.

ಮಾನ್ಯ ಲೋಕಾಯುಕ್ತರಿಂದ ಸ್ವೀಕೃತವಾದ ವರದಿಯನ್ನು ಪರಿಶೀಲಿಸಿದ ಸರ್ಕಾರ, ಆರೋಪಿತರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ನಡೆಸಲು ಪರಿಗಣಿಸಿ, ಅಧಿಕಾರಿಯವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಿ, ಲಿಖಿತ ಹೇಳಿಕೆಯನ್ನು ಪಡೆದು ಪರಿಶೀಲಿಸಿ, ಮೇಲೆ ಓದಲಾದ (2)ರ ಸರ್ಕಾರದ ಆದೇಶ ಸಂಖ್ಯೆ:ಕಂಇ 28 ಮುನೋಸೇ (1) 2005 ದಿನಾಂಕ:28-02-2006ರಲ್ಲಿ ಸದರಿ ಅಧಿಕಾರಿಯ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು, 1957ರ ನಿಯಮ 14 ಎ (2ಎ) ಅನ್ವಯ ಇಲಾಖಾ ವಿಚಾರಣೆ ನಡೆಸುವುದನ್ನು ಕೈಬಿಟ್ಟು ಆರೋಪಗಳಿಂದ ಮುಕ್ತಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ (3)ರ ಮಾನ್ಯ ಉಪ ಲೋಕಾಯುಕ್ತರ ಅರೆ ಸರ್ಕಾರಿ ಪತ್ರದಲ್ಲಿ ಹೊರಡಿಸಲಾದ ಸರ್ಕಾರದ ಆದೇಶ ತೃಪ್ತಿಕರವಿರುವುದಿಲ್ಲವೆಂದು ತಿಳಿಸಿ ಪ್ರಕರಣವನ್ನು ಮರುಪರಿಶೀಲಿಸಿ, ಸದರಿ ಅಧಿಕಾರಿಯ ವಿರುದ್ಧ ಸರ್ಕಾರವು ಕ್ರಮ ಜರುಗಿಸಲು ಪರಿಶೀಲಿಸುವಂತೆ ತಿಳಿಸಲಾಗಿದ್ದು, ಅದರಂತೆ ಪ್ರಕರಣವನ್ನು ನಿಯಮಾನುಸಾರ ಮರುಪರಿಶೀಲಿಸಲು ಸರ್ಕಾರವು ತೀರ್ಮಾನಿಸಿ ಮೇಲೆ ಓದಲಾದ(4) ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು, 1957ರ ನಿಯಮ 11(2)ರನ್ವಯ ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ನಗರ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (5)ರ ಸರ್ಕಾರದ ಆದೇಶದಲ್ಲಿ ಪ್ರಾದೇಶಿಕ ಆಯುಕ್ತರವರಿಗೆ ಕೆಲಸದ ಒತ್ತಡದ ಹಿನ್ನೆಲೆಯಲ್ಲಿ ಹಾಗೂ ವಿಚಾರಣೆಯ ತೀವ್ರತೆಯನ್ನು ಗಮನಿಸಿ ಪ್ರಕರಣದ ವಿಚಾರಣೆಯನ್ನು ಪ್ರಾದೇಶಿಕ ಆಯುಕ್ತರ ಬದಲಾಗಿ, ನಿವೃತ್ತ ನ್ಯಾಯಾಧೀಶರಿಂದ ನಡೆಸಲು ನಿರ್ಧರಿಸಿ, ಶ್ರೀ ಎಂ.ಜೆ.ಹಿರೇಮಠ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಜಿಲ್ಲಾ ನೋಂದಣಾಧಿಕಾರಿ, ಬಸವನಗುಡಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದ್ದು, ಪ್ರಕರಣದ ವಿಚಾರಣಾಧಿಕಾರಿಗಳಾದ ಶ್ರೀ ಎಂ.ಜಿ.ಹಿರೇಮಠ, ನಿವೃತ್ತ ನ್ಯಾಯಾಧೀಶರು ನಿಯಮಾನುಸಾರ ವಿಚಾರಣೆ ನಡೆಸಿ, ಮೇಲೆ ಓದಲಾದ (6)ರಂತೆ ವಿಚಾರಣಾ ವರದಿಯನ್ನು ದಿನಾಂಕ: 13-9-2010ರಂದು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಶ್ರೀ ಭೋಜ್ಯಾ ನಾಯ್ಕ್, ಕೇಂದ್ರಸ್ಥಾನ ಉಪ ನೋಂದಣಾಧಿಕಾರಿ, ಹಾಲಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಆಡಳಿತ) ಇವರ ವಿರುದ್ಧದ ಆಪಾದನೆಗೆ ಸಂಬಂಧಿಸಿದಂತೆ ವಿವಾಹ ಪ್ರಮಾಣ ಪತ್ರವನ್ನು ರದ್ದುಪಡಿಸಲು ಯಾವುದೇ ನಿಯಮವಿಲ್ಲವೆಂದು ಆರೋಪದಲ್ಲಿ ಕಾಣಿಸಿದ್ದನ್ನು ಸಾಬೀತುಪಡಿಸಲು ಮಂಡನಾಧಿಕಾರಿಗಳು ಯಾವುದೇ ಕಾನೂನನ್ನು ತಮ್ಮ ಗಮನಕ್ಕೆ ತಂದಿಲ್ಲವಾದ್ದರಿಂದ ಹಾಗೂ ಮಂಡನಾಧಿಕಾರಿಗಳು ಆಪಾದಿತ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪವನ್ನು ಸಾಬೀತುಪಡಿಸಲು ವಿಫಲರಾಗಿರುವ ಹಿನ್ನೆಲೆಯಲ್ಲಿ ಆಪಾದಿತರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದಿಲ್ಲವೆಂದು ಮತ್ತು ಕರ್ನಾಟಕ ನೋಂದಣಿ ನಿಯಮಗಳು 1965ರ 123ನ್ನು ಆರೋಪಿತರು ಉಲ್ಲಂಘಿಸಿಲ್ಲ ಮತ್ತು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ (i)(ii) & (iii) ಉಲ್ಲಂಘಿಸಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳವರ ವರದಿಯಲ್ಲಿನ ಅಂಶಗಳು ಮತ್ತು ವಿಚಾರಣಾಧಿಕಾರಿಗಳ ನಿರ್ಣಯನ್ನು ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 150 ಮುನೋಮು 2006, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಾನ್ಯ ಉಪ ಲೋಕಾಯುಕ್ತರವರ ವರದಿ ಅನ್ವಯ ಶ್ರೀ ಭೋಜ್ಯಾ ನಾಯ್ಕ್, ಕೇಂದ್ರಸ್ಥಾನ ಉಪ ನೋಂದಣಾಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಹಾಲಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಆಡಳಿತ) ಇವರ ವಿರುದ್ಧದ ಆಪಾದನೆಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಗಳಿಗೆ ವಹಿಸಿದ್ದು, ಈ ಸಂಬಂಧ ಆರೋಪಿತ ಅಧಿಕಾರಿಗಳ ವಿರುದ್ಧ ಮಾಡಲಾದ ಆರೋಪಗಳು ವಿಚಾರಣಾ ವರದಿಯಲ್ಲಿ ಸಾಬೀತಾಗಿರುವುದಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ, ವಿಚಾರಣಾಧಿಕಾರಿಗಳ ನಿರ್ಣಯ ಮತ್ತು ವರದಿಯನ್ನು ಒಪ್ಪಿದ ಸರ್ಕಾರವು ಶ್ರೀ ಬೋಜ್ಯಾ ನಾಯ್ಕ್, ಕೇಂದ್ರಸ್ಥಾನ ಉಪ ನೋಂದಣಾಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ಹಾಲಿ ಸಹಾಯಕ ನೋಂದಣಿ ಮಹಾಪರಿವೀಕ್ಷಕರು (ಆಡಳಿತ) ಇವರನ್ನು ಆರೋಪಗಳಿಂದ ಮುಕ್ತಗೊಳಿಸಲಾಗಿದೆ ಹಾಗೂ ಈ ಸಂಬಂಧದ ಇಲಾಖಾ ವಿಚಾರಣೆ ಪ್ರಕರಣವನ್ನು ಸರ್ಕಾರದ ಹಂತದಲ್ಲಿ ಮುಕ್ತಾಯಗೊಳಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ.ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ

(ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್.754

## ಇಂಧನ ಸಚಿವಾಲಯ

**ವಿಷಯ :** ಮೆ: ಸುಭಾಷ್ ಕಬಿನಿ ಪವರ್ ಕಾರ್ಪೊರೇಷನ್ ಲಿಮಿಟೆಡ್ ರವರ 3.00 ಮೆ.ವ್ಯಾ. ಸಾಮರ್ಥ್ಯದ ಹಿರೇಮಳಲಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ: ಸನ್ಮತಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 223 ಎನ್‌ಸಿಇ 2009, ದಿನಾಂಕ 16-1-2010

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ /06/SH-358/ಹಿರೇಮಳಲಿ ಕಿಜವಿಯೊ/2012/561, ದಿನಾಂಕ 15/18-02-2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಸುಭಾಷ್ ಕಬಿನಿ ಪವರ್ ಕಾರ್ಪೊರೇಷನ್ ಲಿಮಿಟೆಡ್ ರವರಿಗೆ ದಾವಣಗೆರೆ ಜಿಲ್ಲೆಯ ಚೆನ್ನಗಿರಿ ತಾಲ್ಲೂಕಿನ ಹಿರೇಮಳಲಿ ಗ್ರಾಮದ ಭದ್ರಾ ಬಲ ದಂಡೆ ಕಾಲುವೆಗೆ ಅಡ್ಡಲಾಗಿ 3.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir-**Latitude:** 14°03'42'' **Longitude:** 75°52'00'' **Power House - Latitude:** 14°03'40'' **Longitude:** 75°52'00'') ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಸುಭಾಷ್ ಕಬಿನಿ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯವರಿಗೆ ದಾವಣಗೆರೆ ಜಿಲ್ಲೆಯ ಚೆನ್ನಗಿರಿ ತಾಲ್ಲೂಕಿನ ಹಿರೇಮಳಲಿ ಗ್ರಾಮದ ಭದ್ರಾ ಬಲ ದಂಡೆ ಕಾಲುವೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮುಂದೆ ಯಾವುದೇ ರೀತಿ ವರ್ಗಾವಣೆ ಮಾಡಲಾಗುವುದಿಲ್ಲ ಎಂಬ ಷರತ್ತಿಗನುಗುಣವಾಗಿ ಮೆ: ಸನ್ಮತಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 456 ಎನ್‌ಸಿಇ 2011, ಬೆಂಗಳೂರು, ದಿನಾಂಕ 03–03–2012**

ಮೆ: ಸುಭಾಷ್ ಕಬಿನಿ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಯವರಿಗೆ ದಾವಣಗೆರೆ ಜಿಲ್ಲೆಯ ಚೆನ್ನಗಿರಿ ತಾಲ್ಲೂಕಿನ ಹಿರೇಮಳಲಿ ಗ್ರಾಮದ ಭದ್ರಾ ಬಲ ದಂಡೆ ಕಾಲುವೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 3.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೆ: ಸನ್ಮತಿ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಮುಂದೆ ಯಾವುದೇ ರೀತಿ ವರ್ಗಾವಣೆಗೆ ಅವಕಾಶವಿಲ್ಲವೆಂಬ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮೋದನೆ ನೀಡಲಾಗಿದೆ:–

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 786

## ಇಂಧನ ಸಚಿವಾಲಯ

**ವಿಷಯ :** ಮೆ: ಸೋಹಂ ರಿನ್ಯೂವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 6.00 ಮೆ.ವ್ಯಾ. ಸಾಮರ್ಥ್ಯದ ಮಹಾದೇವಪುರ–2 ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಣೆ ಬಗ್ಗೆ.–

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 446 ಎನ್‌ಸಿಇ 2006, ದಿನಾಂಕ 17–3–2007
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 436 ಎನ್‌ಸಿಇ 2007, ದಿನಾಂಕ 10–12–2007
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 177 ಎನ್‌ಸಿಇ 2011, ದಿನಾಂಕ 31–03–2011
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್.ಹೆಚ್.–275/ಮಹಾದೇವಪುರ/2011/56, ದಿನಾಂಕ 7/9–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ: ಮೈತ್ರಿ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕು ಮಹಾದೇವಪುರ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಕೆಲವೊಂದು ಷರತ್ತಿಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಈ ಸಾಮರ್ಥ್ಯವನ್ನು 2.00 ಮೆ.ವ್ಯಾ.ನಿಂದ 6.00 ಮೆ.ವ್ಯಾ.ಗೆ ಹೆಚ್ಚಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ: ಮೈತ್ರಿ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ಸೋಹಂ ರಿನ್ಯೂವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಎಂದು ಬದಲಾಯಿಸಿ ಮೇಲಿನ ಯೋಜನೆಯನ್ನು ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೆ: ಸೋಹಂ ರಿನ್ಯೂವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಜೂರಾಗಿರುವ 6.00 ಮೆ.ವ್ಯಾ. ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶವನ್ನು ಪ್ರತಿ ಮೆಗಾ ವ್ಯಾಟ್‌ಗೆ 3 ಲಕ್ಷಗಳ ನೆರವೇರಿಕೆ ಖಾತರಿ (Performance Guarantee) ನೀಡತಕ್ಕದ್ದೆಂಬ ಷರತ್ತಿಗೊಳಪಟ್ಟು ದಿನಾಂಕ 30–1–2012 ರಿಂದ ದಿನಾಂಕ 31–12–2013ರವರೆಗೆ ವಿಸ್ತರಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 28 ಎನ್‌ಸಿಇ 2012, ಬೆಂಗಳೂರು, ದಿನಾಂಕ 29–02–2012**

ಮೆ: ಸೋಹಂ ರಿನ್ಯೂವೆಬಲ್ ಎನರ್ಜಿ ಇಂಡಿಯಾ ಪ್ರೈವೇಟ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕು ಮಹಾದೇವಪುರ ಗ್ರಾಮದ ಬಳಿ ಕಾವೇರಿ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ 30–01–2012 ರಿಂದ 31–12–2013ರವರೆಗೆ ಪ್ರತಿ ಮೆಗಾ ವ್ಯಾಟ್‌ಗೆ 3 ಲಕ್ಷಗಳ ನೆರವೇರಿಕೆ ಖಾತರಿ (Performance Guarantee) ನೀಡತಕ್ಕದ್ದೆಂಬ ಷರತ್ತಿಗೊಳಪಟ್ಟು ವಿಸ್ತರಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 787

## ಇಂಧನ ಸಚಿವಾಲಯ

**ವಿಷಯ :** ಮೆ: ಸುಜ್ಲಾನ್ ಎನರ್ಜಿ ಲಿಮಿಟೆಡ್ ರವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಮಂಜೂರಾಗಿರುವ 10.5 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 230 ಎನ್‌ಸಿಇ 2004, ದಿನಾಂಕ 13–09–2004

2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 483 ಎನ್‌ಸಿಇ 2010, ದಿನಾಂಕ 28–12–2010

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ ಸುಜ್ಲಾನ್–10.5 ಮೆ.ವ್ಯಾ./2012/40, ದಿನಾಂಕ 03/07–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಸುಜ್ಲಾನ್ ಎನರ್ಜಿ ಲಿಮಿಟೆಡ್ ಇವರಿಗೆ ಬಳ್ಳಾರಿ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ 91 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೆ: ಸುಜ್ಲಾನ್ ಎನರ್ಜಿ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಹಂಚಿಕೆಯಾಗಿದ್ದ 91 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ, ಬೆಳಗಾಂ ಜಿಲ್ಲೆಯಲ್ಲಿ ಹಂಚಿಕೆಯಾಗಿರುವ 6.00 ಮೆಗವ್ಯಾಟ್ ಅಂಶಿಕ ಸಾಮರ್ಥ್ಯವನ್ನು 10.5 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಹೆಚ್ಚಿಸಿ, ಯೋಜನೆಯನ್ನು ಅನುಷ್ಠಾನಗೊಳಿಸಲು ದಿನಾಂಕ 25–06–2011ರವರೆಗೆ ಕಾಲಾವಕಾಶವನ್ನು ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೆ: ಸುಜ್ಲಾನ್ ಎನರ್ಜಿ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಹಂಚಿಕೆಯಾಗಿರುವ 10.5 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯು ಪ್ರಗತಿಯ ಹಂತದಲ್ಲಿರುವುದರಿಂದ ಯೋಜನಾ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ 30–06–2012ರ ವರೆಗೆ ವಿಸ್ತರಿಸಲು ಅಭಿವೃದ್ಧಿದಾರರ ಕೋರಿಕೆ ಮೇರೆಗೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 27 ಎನ್‌ಸಿಇ 2012, ಬೆಂಗಳೂರು, ದಿನಾಂಕ 01–03–2012**

ಮೆ: ಸುಜ್ಲಾನ್ ಎನರ್ಜಿ ಲಿಮಿಟೆಡ್, ಇವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಮಂಜೂರಾಗಿರುವ 10.5 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 788

## ಇಂಧನ ಸಚಿವಾಲಯ

**ವಿಷಯ :** ಮೆ: ಐಸಿಎಲ್ ಶುಗರ್ಸ್ ಲಿಮಿಟೆಡ್ ಕಂಪನಿಗೆ 12 ಮೆ.ವ್ಯಾ. ಸಾಮರ್ಥ್ಯದ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಘಟಕವನ್ನು ಸ್ಥಾಪಿಸಲು ನೀಡಿರುವ ಅನುಮತಿಯನ್ನು 30 ಮೆ.ವ್ಯಾ.ಗೆ ಹೆಚ್ಚಿಸುವ ಬಗ್ಗೆ ಹಾಗೂ ಕಂಪೆನಿಯ ಹೆಸರನ್ನು ಮೆ: ಕೋರಮಂಡಲ್ ಶುಗರ್ಸ್ ಲಿಮಿಟೆಡ್ ಎಂದು ಬದಲಾಯಿಸುವ ಬಗ್ಗೆ.–

**ಓದಲಾಗಿದೆ :** 1) ಸರ್ಕಾರಿ ಪತ್ರ ಸಂಖ್ಯೆ: ಡಿಇ 19 ಎನ್‌ಸಿಇ 1998, ದಿನಾಂಕ 22–05–1998

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ಎಫ್–5/ಐಸಿಎಲ್/2011–12/4555, ದಿನಾಂಕ 07–12–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ: ಐಸಿಎಲ್ ಶುಗರ್ಸ್ ಲಿಮಿಟೆಡ್, ಚನ್ನೈ ಇವರಿಗೆ 12 ಮೆಗಾ ವ್ಯಾಟ್ ಸಾಮರ್ಥ್ಯದ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಘಟಕವನ್ನು ಮಂಡ್ಯ ಜಿಲ್ಲೆಯ, ಕೆ.ಆರ್. ಪೇಟೆ ತಾಲ್ಲೂಕಿನ, ಮಾಕಾವಳ್ಳಿ ಗ್ರಾಮದಲ್ಲಿ ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಐಸಿಎಲ್ ಶುಗರ್ಸ್ ಲಿಮಿಟೆಡ್ ಕಂಪನಿಯು ಮೇಲಿನ 12 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ದಿನಾಂಕ 6–2–2006 ರಂದು ಅನುಷ್ಠಾನಗೊಳಿಸಿರುತ್ತದೆಯೆಂದು ತಿಳಿಸಿರುತ್ತಾರೆ ಮತ್ತು ಮೇಲಿನ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಘಟಕದ ಸಾಮರ್ಥ್ಯವನ್ನು 12 ಮೆ.ವ್ಯಾ. ನಿಂದ 30 ಮೆ.ವ್ಯಾ.ಗೆ ಹೆಚ್ಚಿಸಿ 22.2 ಮೆ.ವ್ಯಾ (exportable) during season ಹಾಗೂ 27.2 ಮೆ.ವ್ಯಾ. (exportable) during off season ಮತ್ತು ಕಂಪೆನಿಯ ಹೆಸರನ್ನು ಮೆ: ಕೋರಮಂಡಲ್ ಶುಗರ್ಸ್ ಲಿಮಿಟೆಡ್ ಎಂದು ಬದಲಾಯಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 467 ಎನ್‌ಸಿಇ 2011, ಬೆಂಗಳೂರು, ದಿನಾಂಕ 24–02–2012**

ಮೆ: ಐಸಿಎಲ್ ಶುಗರ್ಸ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ: ಕೋರಮಂಡಲ್ ಶುಗರ್ಸ್ ಲಿಮಿಟೆಡ್ ಎಂದು ಬದಲಾಯಿಸಲಾಗಿದೆ ಮತ್ತು ಈ ಕಂಪನಿಯು ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಮಾಕಾವಳ್ಳಿ ಗ್ರಾಮದಲ್ಲಿ ಸ್ಥಾಪಿಸಿರುವ ಕಬ್ಬಿನ ಸಿಪ್ಪೆ ಆಧಾರಿತ ಸಹ–ವಿದ್ಯುತ್ ಘಟಕದ

ಸಾಮರ್ಥ್ಯವನ್ನು 12 ಮೆ.ವ್ಯಾ. ನಿಂದ 30 ಮೆ.ವ್ಯಾ.ಗೆ (22.2 ಮೆ.ವ್ಯಾ. exportable, during season ಹಾಗೂ 27.2 ಮೆ.ವ್ಯಾ. exportable during off season) ಹೆಚ್ಚಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 789

## ಶಿಕ್ಷಣ ಸಚಿವಾಲಯ

**ವಿಷಯ :** 13ನೇ ಹಣಕಾಸು ಆಯೋಗದಿಂದ ಪ್ರಾಥಮಿಕ ಶಿಕ್ಷಣಕ್ಕಾಗಿ ಸರ್ವ ಶಿಕ್ಷಣ ಅಭಿಯಾನ ಯೋಜನೆ ಅನುಷ್ಠಾನಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.–

**ಓದಲಾಗಿದೆ :** 1) 13ನೇ ಹಣಕಾಸು ಆಯೋಗದ ಶಿಫಾರಸ್ಸುಗಳು

2) ವಿತ್ತ ಮಂತ್ರಾಲಯದ ಪತ್ರ ಸಂಖ್ಯೆ: ಎಫ್.ಡಿ. 7(10)/ಎಫ್.ಸಿ.ಡಿ./–02, ಇಇಉ, ದಿನಾಂಕ 8–8–2011.

3) ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ: ಆ.ಇ. 26: ಆಆಕೋ 2010, ದಿನಾಂಕ 31–1–2012

4) ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನರವರ ಪತ್ರ ಸಂಖ್ಯೆ: ಸಶಿಅ/ಮುಲೆಅ/13ನೇ ಹಣಕಾಸು/11–12, ದಿನಾಂಕ 7–9–2011.

**ಪ್ರಸ್ತಾವನೆ :**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮೇಲೆ ಓದಲಾದ (1)ರ ಶಿಫಾರಸ್ಸಿನಲ್ಲಿ 13ನೇ ಹಣಕಾಸು ಆಯೋಗದ ಶಿಫಾರಸ್ಸಿನಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಆರ್ಥಿಕ ಆಯೋಗವು 2011–12ನೇ ಸಾಲಿಗೆ ರೂ. 119.00 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನರವರು 13ನೇ ಹಣಕಾಸು ಆಯೋಗವು 2011–12ನೇ ಸಾಲಿಗೆ ಸರ್ವ ಶಿಕ್ಷಣ ಅಭಿಯಾನ ಕಾರ್ಯಕ್ರಮ ಅನುಷ್ಠಾನಕ್ಕೆ ಒದಗಿಸಿರುವ ರೂ. 119.00 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 170 ಎಂ.ಸಿ.ಡಿ. 2010, ಬೆಂಗಳೂರು, ದಿನಾಂಕ 18–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ 2011–12ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202–01–800–1–53 (ಯೋಜನೆ) ಪ್ರಾಥಮಿಕ ಶಿಕ್ಷಣಕ್ಕಾಗಿ 13ನೇ ಹಣಕಾಸು ಆಯೋಗ ಸಹಾಯಾನುದಾನದಡಿ ಆಯೋಗವು ಶಿಫಾರಸ್ಸು ಮಾಡಿರುವ ಮತ್ತು ಎಂಹೆಚ್ಆರ್‌ಡಿ ಇಲಾಖೆಯು ತನ್ನ ವಾರ್ಷಿಕ ಯೋಜನೆಯಡಿ ಅನುಮೋದಿತ ಕಾರ್ಯಕ್ರಮಗಳನ್ನು ಅನುಷ್ಠಾಗೊಳಿಸಲು ರೂ. 119.00 ಕೋಟಿ ರೂಪಾಯಿಗಳನ್ನು (ಒಂದು ನೂರ ಹತ್ತೊಂಭತ್ತು ಕೋಟಿ ರೂಪಾಯಿಗಳು ಮಾತ್ರ) ಈ ಕೆಳಗೆ ನಮೂದಿಸಿರುವ ಲೆಕ್ಕ ಶೀರ್ಷಿಕೆಗಳಲ್ಲಿರುವಂತೆ ರಾಜ್ಯ ಯೋಜನಾ ನಿರ್ದೇಶಕರು ಸರ್ವ ಶಿಕ್ಷಣ ಅಭಿಯಾನರವರಿಗೆ ಬಿಡುಗಡೆ ಮಾಡಲಾಗಿದೆ.

| | *(ರೂ. ಲಕ್ಷಗಳಲ್ಲಿ)* |
|---|---|
| 13ನೇ ಆರ್ಥಿಕ ಆಯೋಗದ ಅನುದಾನ 2202–01–800–1–53 | |
| 2202–01–800–1–53–102 | 2716.92 |
| 2202–01–800–1–53–133 | 1500.00 |
| 2202–01–800–1–53–422 | 4142.75 |
| 2202–01–800–1–53–423 | 3540.33 |
| **ಒಟ್ಟು** | **11900.00** |

ಉದ್ದೇಶಿತ ಹಣವನ್ನು ಸರ್ವ ಶಿಕ್ಷಣ ಅಭಿಯಾನ ಯೋಜನೆಯ ಅನುಮೋದಿತ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಸಲುವಾಗಿ ಮಾತ್ರ ಭರಿಸಲು ಹಾಗೂ ತ್ರೈಮಾಸಿಕ ಬಳಕೆ ಪ್ರಮಾಣ ಪತ್ರವನ್ನು ಕಾಲ ಕಾಲಕ್ಕೆ ನಿಗದಿತ ನಮೂನೆಯಲ್ಲಿ ನೀಡುವ ಷರತ್ತನ್ನು ವಿಧಿಸಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ: 26 ಎಫ್‌ಸಿಸಿ 2010 ದಿನಾಂಕ 31–01–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಐ. ಎಫ್. ಮಾಗಿ**
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

ಪಿ.ಆರ್. 790

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಡಾ॥ ಜಿ.ಸಿ. ಪ್ರಕಾಶ್ ಐ.ಎ.ಎಸ್., ಇವರ ಕಡ್ಡಾಯ ನಿರೀಕ್ಷಣಾ ಅವಧಿಯನ್ನು ಸಕ್ರಮಗೊಳಿಸುವ ಕುರಿತು.–

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 83 ಆಸೇವ 2011(11), ದಿನಾಂಕ 17-09-2011

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 571 ಎಸ್‌ಎಎಸ್ 2011, ದಿನಾಂಕ 09–11–2011

3) ಡಾ॥ ಜಿ.ಸಿ. ಪ್ರಕಾಶ್, ಐ.ಎ.ಎಸ್., ಇವರ ಪತ್ರ ದಿನಾಂಕ 30-01–2012

**ಪ್ರಸ್ತಾವನೆ :**

ಡಾ॥ ಜಿ. ಸಿ. ಪ್ರಕಾಶ್, ಇವರನ್ನು ನಾನ್–ಐಎಎಸ್ ನಿಂದ ಭಾರತೀಯ ಆಡಳಿತ ಸೇವಾ ವೃಂದಕ್ಕೆ ಬಡ್ತಿ ನೀಡಿ ಭಾರತ ಸರ್ಕಾರ ಹೊರಡಿಸಿದ ಅಧಿಸೂಚನೆಯನ್ನು ರಾಜ್ಯ ಸರ್ಕಾರ ದಿನಾಂಕ 09–09–2011 ರಂದು ಪ್ರಕಟಿಸಿದೆ. ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ 17–09–2011ರ ಅಧಿಸೂಚನೆಯಲ್ಲಿ ಇವರನ್ನು ಕರ್ತವ್ಯ ನಿರ್ವಹಿಸುತ್ತಿದ್ದ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬಾಗಲಕೋಟೆ ಹುದ್ದೆಯಿಂದ ವರ್ಗಾಯಿಸಿ ಆದೇಶಿಸಿದ್ದರ ಮೇರೆಗೆ, ಸದರಿಯವರು ದಿನಾಂಕ 20–10–2011ರ ಅಪರಾಹ್ನ ಸದರಿ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟು, ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ತದನಂತರ ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ನೇಮಕಾತಿ ನಿರೀಕ್ಷಣೆಯಲ್ಲಿದ್ದ ಡಾ॥ ಜಿ.ಸಿ. ಪ್ರಕಾಶ್, ಐ.ಎ.ಎಸ್., ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಗಮ ನಿಯಮಿತ, ಗುಲ್ಬರ್ಗಾ ಹುದ್ದೆಗೆ ನೇಮಕ ಮಾಡಲು, ಇವರ ಸೇವೆಯನ್ನು ಇಂಧನ ಇಲಾಖೆಯ ವಶಕ್ಕೆ ನೀಡಲಾಗಿದೆ. ಇಂಧನ ಇಲಾಖೆಯ ಅಧಿಸೂಚನೆ ದಿನಾಂಕ 03–12–2011ರಲ್ಲಿ ಇವರಿಗೆ ವ್ಯವಸ್ಥಾಪಕ ನಿರ್ದೇಶಕರು, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ನಿಗಮ ನಿಯಮಿತ, ಗುಲ್ಬರ್ಗಾ ಹುದ್ದೆಗೆ ಮರುನೇಮಕಾತಿ ನೀಡಿದ್ದು, ಸದರಿಯವರು ದಿನಾಂಕ 05–12–2011ರ ಪೂರ್ವಾಹ್ನ ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ದಿನಾಂಕ 30–01–2012ರ ಪತ್ರದಲ್ಲಿ ಡಾ॥ ಜಿ. ಸಿ. ಪ್ರಕಾಶ್, ಐ.ಎ.ಎಸ್., ಇವರು ತಾವು ದಿನಾಂಕ 21–10–2011 ರಿಂದ 04–12–2011ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸಿ ಸೂಕ್ತ ಆದೇಶ ಹೊರಡಿಸುವಂತೆ ಕೋರಿದ್ದಾರೆ.

ಸರ್ಕಾರವು ಪ್ರಕರಣವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಎಸ್‌ಐಎಸ್ 2012, ಬೆಂಗಳೂರು, ದಿನಾಂಕ 24–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಜಿ ಸಿ. ಪ್ರಕಾಶ್, ಐ.ಎ.ಎಸ್. ಇವರು ದಿನಾಂಕ 21–10–2011 ರಿಂದ 04–12–2011 ರಂದು ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸರ್ಕಾರವು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್)ರ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಸಕ್ರಮಗೊಳಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/1/ಟಿಎಫ್‌ಪಿ/96, ದಿನಾಂಕ 10–07–96ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು. ಹೆಚ್. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 791 ಸಿಆಸು ಇಲಾಖೆ (ಸೇವೆಗಳು–1)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಯಾದಗಿರಿ ಜಿಲ್ಲೆ ಹಾಗೂ ತಾಲ್ಲೂಕಿನ ಕೌಳೂರು ಗ್ರಾಮದ ಹತ್ತಿರ 2ನೇ ಹಂತದ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.–

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(6) (ತಾಂತ್ರಿಕ) ದಿನಾಂಕ 19–12–2010

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ/(ಉ)ವ/ಬಿಜೆಪಿಪಿಬಿ–5/2011–12/1031, ದಿನಾಂಕ 24–02–2012.

**ಪ್ರಸ್ತಾವನೆ :**

ಯಾದಗಿರಿ ಜಿಲ್ಲೆ ಹಾಗೂ ತಾಲ್ಲೂಕಿನ ಕೌಳೂರು ಗ್ರಾಮದ ಹತ್ತಿರ 2ನೇ ಹಂತದ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿ ಅಂದಾಜಿಗೆ ಉಲ್ಲೇಖ (1) ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರ ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರಕಿರುತ್ತದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಈ ಹಿಂದೆ ಕರೆಯಲಾಗಿದ್ದ ಮೊದಲನೇ ಟೆಂಡರ್ ಕರೆಗೆ ಸ್ವೀಕೃತವಾಗಿದ್ದ ಟೆಂಡರ್ ದರಗಳು ಬಹಳ ಹೆಚ್ಚಾಗಿದ್ದರಿಂದ ಅದನ್ನು ತಿರಸ್ಕರಿಸಲಾಗಿರುತ್ತದೆ. ಎರಡನೇ ಬಾರಿಗೆ ಕರೆಯಲಾದ ಟೆಂಡರ್ ಕರೆಗೆ ಯಾವುದೇ ಗುತ್ತಿಗೆದಾರರು ಭಾಗವಹಿಸದೇ ಇದ್ದುದರಿಂದ ಕಾರ್ಯಪಾಲಕ ಇಂಜಿನಿಯರ್, ಸ.ನೀ. ವಿಭಾಗ, ಗುಲ್ಬರ್ಗಾರವರು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಮೂರನೇ ಬಾರಿಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 23–12–2011 |
| ಜಿಲ್ಲಾ ಟೆಂಡರ್ ಬುಲೆಟಿನ್ | 24–12–2011 |
| ವಿಜಯ ಕರ್ನಾಟಕ ದಿನಪತ್ರಿಕೆ | 22–12–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್‌ಅನ್ನು ದಿನಾಂಕ 09–01–2012ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 2,33,54,910/– | |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 2,82,76,353/– | |
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಮೆ. ತಾಪಿ ಪ್ರಿಸ್ಟ್ರೆಸ್ಡ್ ಪ್ರಾಡಕ್ಟ್ಸ್ ಲಿ. ಒಂದನೇ ದರ್ಜೆ ಗುತ್ತಿಗೆದಾರರು | 3,48,75,901/– | 49.33 ಹೆಚ್ಚು | 23.34 ಹೆಚ್ಚು |

ಮೇಲ್ಕಂಡಂತೆ ಮೆ: ತಾಪಿ ಪ್ರಿಸ್ಟ್ರೆಸ್ಡ್ ಪ್ರಾಡಕ್ಟ್ಸ್ ಲಿ., ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್ ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 23.34 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 29–02–2012ರ ಪತ್ರದಲ್ಲಿ ತಾವು ನಮೂದಿಸಿರುವ ದರಗಳನ್ನು ಕಡಿಮೆಗೊಳಿಸಿ ಪರಿಷ್ಕೃತ ಟೆಂಡರಿಗಿಟ್ಟ ಮೊತ್ತದ ಮೇಲೆ ಕನಿಷ್ಠ ಶೇ. 18.00 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸಲು ಸಹಮತಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 2,82,76,353/–ಗಳ ಮೇಲೆ ಶೇ. 16.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 3,28,00,569/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಸನೀಇ 10 ಏನೀಯೋ 2012 (ತಾಂತ್ರಿಕ), ಬೆಂಗಳೂರು, ದಿನಾಂಕ 03–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಯಾದಗಿರಿ ಜಿಲ್ಲೆ ಹಾಗೂ ತಾಲ್ಲೂಕಿನ ಕೌಳೂರು ಗ್ರಾಮದ ಹತ್ತಿರ 2ನೇ ಹಂತದ ಏತ ನೀರಾವರಿ ಯೋಜನೆ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 2,82,76,353/–ಗಳ ಮೇಲೆ ಶೇ. 16.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ 3,28,00,569/–ಗಳಿಗೆ (ರೂ. ಮೂರು ಕೋಟಿ ಇಪ್ಪತ್ತೆಂಟು ಲಕ್ಷದ ಐನೂರ ಅರವತ್ತೊಂಭತ್ತು ಮಾತ್ರ) ಗಳಿಗೆ ಮೆ: ತಾಪಿ ಪ್ರಿಸ್ಟ್ರೆಸ್ಡ್ ಪ್ರಾಡಕ್ಟ್ ಲಿ., ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 792

## ANIMAL HUSBANDRY AND FISHERIES SECRETARIAT

**Sub :** Extension of deputation period of Dr. C. K. Murthy, Executive Director (Tech), National Fisheries Development Board, Hyderabad-Reg.

**Read :**
1) Notification No AHF/17/SFE/2009, dated 26-02-2009
2) G.O. No. AHF/186/SFE/2010, dated 21-01-2011
3) Letter No. NFDB/ADMN/Addl. Staff/2012/14919, dated 01-03-2012
4) Letter No. Sibbandi (1)/151/2011-12, dated 23-02-2012

**Preamble:**

Vide Notification dated 26-02-2009 read at (1) above, Dr. C. K. Murthy, Joint Director of Fisheries was deputed as Executive Director (Tech), National Fisheries Development Board, Hyderabad, for a period of three years or until further orders.

In Government Order dated 21-01-2011 read at (2) above, the terms and conditions of the deputation of Dr. C. K. Murthy was issued. Accordingly his deputation period will expires on 10-03-2012.

In the letter dated 01-03-2012 read at (3) above, Senior Executive Director and Chief Executive I/c, NFDB, Hyderabad, has requested this Department to convey the approval for extension of the term of deputation of Dr. C. K. Murthy for further period of two years beyond 10-3-2012.

In the letter dated 23-02-2012 read at (4) above, the Director of Fisheries, Bangalore, has informed and requested that since the deputation of Dr. C. K. Murthy expires on 10-3-2012, his deputation may be extended further for a period of one year from 11-03-2012 on the same Terms and Conditions.

After examination, it has been decided to extend the deputation of Dr. C. K. Murthy, Accordingly the following order.

**G.O. No. AHF 41 SFE 2012, Bangalore, dated 03-03-2012**

In the circumstances explained above, Government is hereby extend the term of deputation of Dr. C. K. Murthy, working as Executive Director (Tech) National Fisheries Development Board, Hyderabad, for a further period of one year from 10-03-2012 or until further orders whichever is earlier on the same terms & conditions prescribed in the Order No. AHF/186/SFE/2010, dated 21-01-2011.

By Order and in the name of the Governor of Karnataka

**D. M. Rajanna**

Under Secretary to Government

P.R. 793 Animal Husbandry and Fisheries Department (F)

## FOREST, ECOLOGY AND ENVIRONMENT SECRETARIAT

**Sub :** Diversion of 0.0049 ha. of forest land for construction of Ground Based BSNL Tower for Mobile Service in favour of Assistant General Manager (Plg), O/o the G.M.T.D. BSNL, Karwar.

**Read :**
1) Letter No. A5(2) GFL.CR. 16/09-10, dated : 16/04/2010 of the Principal Chief Conservator of Forest, Bangalore.
2) State Government Letter No. FEE 78 FLL 2010, dated: 28-07-2010.
3) Letter No. 4-KRB 730/2010-BAN/7874, dated : 9th September 2010 of Government of India, Ministry of Environment and Forests, Regional Office, Bangalore.
4) Letter No. A5(2) GFL. CR 16/09-10, dated : 07/04/2011 of the Principal Chief Conservator of Forest, Bangalore.
5) State Government letter No. FEE 78 FLL 2010, dated : 21/05/2011.
6) Letter No. 4-KRB730/2010-BAN/441, dated 9th January 2012 of Government of India, Ministry of Environment and Forests, Regional Office, Bangalore.

**Preamble:**

The Principal Chief Conservator of Forests, Bangalore vide letter dated 16-04-2010 read at (1) above had submitted a proposal to obtain the approval of Government of India under Section 2 of the Forest (Conservation) Act 1980 for diversion of 0.0049 ha. of forest land in Ft. Sy. 80 of Bisgod village of Yellapur Forest Division in Uttara Kannada District situated adjacent to Telephone Exchange for construction of 40 mtr. Ground Based BSNL Tower for GSM Mobile Project for extending Mobile Service to Bisgod and surrounding villages in favour of the Assistant General Manager (Plg), Office of GMTD, BSNL, Karwar-581 301 for a period of 20 years, subject to certain conditions.

2. Accordingly the proposal was recommended to Government of India for approval vide State Government letter dated 28-07-2010 read at (2) above.

3. The Government of India Ministry of Environment and Forests Bangalore agreed to the proposal in principle (Stage-I) under Section 2 of the Forest (Conservation) Act, 1980 vide their letter dated : 9th September 2010 read at (3) above, subject to fulfillment of certain conditions.

4. The Principal Chief Conservator of Forests submitted the compliance report vide his letter dated 07-04-2011 read at (4) above and the same has been sent to Government of India vide State Government letter dated : 21/05/2011 read at (5) above.

5. The Government of India Ministry of Environment and Forests, Bangalore vide their letter dated 9th January 2012 read at (6) above has conveyed their approval (Stage-II) under Section 2 of the Forest (Conservation) Act 1980 for diversion of 0.0049 ha. of forest land in Ft. Sy. No. 80 of Bisgod Village of Yellapur Forest Division in Uttara Kannada District situated adjacent to Telephone Exchage for construction of 40 mtr. Ground Based BSNL Tower for GSM Mobile Project for extending Mobile Service to Bisgod and surrounding villages in favour of the Assistant General Manager (Plg) , Office of the GMTD BSNL, Karwar -581 301 subject to certain conditions.

The proposal has been examined in detail and hence the order.

**Government Order No. FEE 78 FLL 2010 Bangalore, dated 01/03/2012**

In the circumstances explained above in the preamble, the Government is pleased to accord sanction under Section 2 of the Forest (Conservation) Act, 1980 for diversion of 0.0049 ha. of forest land in Ft. Sy. No. 80 of Bisgod Village of Yellapur Forest Division in Uttara Kannada District situated adjacent to Telephone Exchange for construction of 40 mtr. Ground Based BSNL Tower for GSM Mobile Project for extending Mobile service to Bisgod and surrounding villages in favour of the Assistant General Manager (Plg), Office of the GMTD, BSNL, Karwar -581 301 for a period of 20 years, subject to the following conditions:

1. The legal status of the forest land shall remain unchanged and shall continue to be as the forest land.
2. The additional amount of the Net Present Value (NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from the user agency

and the same shall be transferred to either in SB A/c No. SB01025213-CAF Karnataka, Corporation Bank, CGO Complex, Lodhi Road, New Delhi-110003 (RTGS/IFSC No. CORP0000371) or in SB A/c No. 344902010105 421- KARNATAKA CAMPA, Union Bank of India, Sundar Nagar, New Delhi-110003 (RTGS/IFSC No. UBIN0534498).

3. The total forest area utilized for the project shall not exceed 0.0049 ha. In case the land is not taken over by the user agency of the same is not used for the stipulated purpose within a period of two years, then the area shall be taken back by the Forest Department.
4. The land shall be utilized only for the purpose for which it is released.
5. The User Agency (BSNL) has to pay the lease rent as fixed by the Government at the time of sanction and any subsequent Orders in this regard.
6. The lease is granted for a period of twenty (20) years.
7. Karnataka Forest Act, 1963 and the Karnataka Forest Rules, 1969 and will be applicable for any violation.
8. If the land is not utilized for the purpose within two years for which it is granted, the forest land shall be resumed back to the Karnataka Forest Department by the Conservator of Forests following the provisions under Section 82 of the Karnataka Forest Act, 1963.
9. The User Agency has to pay the Net Present Value (NPV) as per the Orders of Hon'ble Supreme Court of India dated 28-3-2008 and 9-5-2008 depending upon the quality and density of the land vegetation.
10. Any other conditions that the Additional Principal Chief Conservator of Forest (Central) Regional Office, Bangalore may impose from time to time for protection, improvement of flora and fauna in the forest area and public convenience, shall also be applicable.
11. Any other condition imposed by the Government of India/the Government of Karnataka and the Principal Chief Conservator of Forests (Head of Forest Force), Bangalore from time to time will have to be abided by the lessee.

By Order and in the name of the Governor of Karnataka

**G.H. Anasuyamma**

Under Secretary to Government

P.R. 794 Forest, Ecology and Environment Department

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ. ಹರೀಶ್ ನಾಯ್ಕ, ವೈದ್ಯಾಧಿಕಾರಿ, ಸ.ಆ.ಕೇಂದ್ರ ನುಗ್ಗೇಹಳ್ಳಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಓ(2ಎ)/ 72/2011–12 ದಿನಾಂಕ: 28/12/2011.

**ಪ್ರಸ್ತಾವನೆ :**

ಡಾ. ಹರೀಶ್ ನಾಯ್ಕ, ಇವರು ಕರ್ನಾಟಕ ಲೋಕ ಸೇವಾ ಆಯೋಗದ ಮೂಲಕ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು, ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 739 ಹೆಚ್‌ಎಸ್‌ಹೆಚ್ 2008 ದಿನಾಂಕ: 09/01/2009 ರ ಪ್ರಕಾರ ದಿನಾಂಕ: 06/02/2009 ರಂದು ಸಮುದಾಯ ಆರೋಗ್ಯ ಕೇಂದ್ರ ನುಗ್ಗೇಹಳ್ಳಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇಲ್ಲಿ ಹುದ್ದೆಗೆ ಹಾಜರಾಗಿರುತ್ತಾರೆ. ನಂತರ ದಿನಾಂಕ: 12/02/2009 ರಿಂದ ಅನಧಿಕೃತ ಗೈರುಹಾಜರಾಗಿ, ವೈಯಕ್ತಿಕ ಕಾರಣಗಳಿಂದ ರಾಜೀನಾಮೆ ಸಲ್ಲಿಸಿರುತ್ತಾರೆ. ವೈದ್ಯರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವೆಂದು ಹಾಗೂ ಇವರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ: 12/02/2009 ರಿಂದ ಅನ್ವಯಿಸಿ ಇವರ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 51 ಹೆಚ್‌ಎಸ್‌ಹೆಚ್ 2012, ಬೆಂಗಳೂರು, ದಿನಾಂಕ 22–02–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ. ಹರೀಶ್ ನಾಯ್ಕ, ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ ನುಗ್ಗೇಹಳ್ಳಿ ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 12–02–2009 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 795 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ. ಲಾವಣ್ಯ ಎಲ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಬೇಲೂರು, ಹಾಸನ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್ಓ(2ಎ)/131/2011–12 ದಿನಾಂಕ: 11–01–2012.

**ಪ್ರಸ್ತಾವನೆ :**

ಡಾ. ಲಾವಣ್ಯ ಎಲ್, ಇವರು ವಿಶೇಷ ಆಯ್ಕೆ ಸಮಿತಿಯ ಮೂಲಕ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು, ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 135 ಹೆಚ್ಎಸ್‌ಹೆಚ್ 2007 ದಿನಾಂಕ: 18/12/2007 ರನ್ವಯ ದಿನಾಂಕ: 04/01/2008 ರಂದು ಸಾರ್ವಜನಿಕ ಆಸ್ಪತ್ರೆ, ಬೇಲೂರು, ಹಾಸನ ಜಿಲ್ಲೆ ಇಲ್ಲಿ ಹುದ್ದೆಗೆ ಹಾಜರಾಗಿ ಕರ್ತವ್ಯ ನಿರ್ವಹಿಸಿರುತ್ತಾರೆ. ನಂತರ ವೈಯಕ್ತಿಕ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ: 31/10/2011 ರಿಂದ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿ ದಿನಾಂಕ: 24/10/2011 ರಂದು ಮನವಿ ಸಲ್ಲಿಸಿರುತ್ತಾರೆ. ಸದರಿ ವೈದ್ಯರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವಾದ್ದರಿಂದ ದಿನಾಂಕ: 31/10/2011 ರಿಂದ ಅನ್ವಯಿಸಿ ಇವರ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 97 ಹೆಚ್ಎಸ್‌ಹೆಚ್ 2012, ಬೆಂಗಳೂರು, ದಿನಾಂಕ 22–02–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ. ಲಾವಣ್ಯ ಎಲ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಬೇಲೂರು, ಹಾಸನ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 31–10–2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 796 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ. ಸವಿತ ಜೆ. ವೈದ್ಯಾಧಿಕಾರಿ, ಸ.ಆ.ಕೇಂದ್ರ, ಸಂತೆಬೆನ್ನೂರು, ದಾವಣಗೆರೆ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್ಓ(1)/158/2011–12 ದಿನಾಂಕ: 18/11/2011.

**ಪ್ರಸ್ತಾವನೆ :**

ಡಾ. ಸವಿತ ಜೆ. ವೈದ್ಯಾಧಿಕಾರಿ, ಸ.ಆ.ಕೇಂದ್ರ ಸಂತೆಬೆನ್ನೂರು, ದಾವಣಗೆರೆ ಜಿಲ್ಲೆ ಇವರು ದಿನಾಂಕ: 24/09/2010 ರ ಪೂರ್ವಾಹ್ನ ಸೇವೆಗೆ ಸೇರಿದ್ದು, ವೈಯಕ್ತಿಕ ಕಾರಣಗಳಿಂದ ದಿನಾಂಕ: 01–06–2011 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿರುತ್ತಾರೆ. ವೈದ್ಯರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವೆಂದು ಹಾಗೂ ಇವರು ಬಾಂಡ್ ಅವಧಿಯಲ್ಲಿ ಇರುವುದಿಲ್ಲವಾದ್ದರಿಂದ ದಿನಾಂಕ: 01/06/2011 ರಿಂದ ಅನ್ವಯಿಸಿ ಇವರ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 74 ಹೆಚ್ಎಸ್‌ಹೆಚ್ 2012, ಬೆಂಗಳೂರು, ದಿನಾಂಕ 22–02–2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಡಾ. ಸವಿತ ಜೆ., ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಸಂತೆಬೆನ್ನೂರು, ದಾವಣಗೆರೆ ಜಿಲ್ಲೆ ಇವರು ವೈಯಕ್ತಿಕ ಕಾರಣದಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 01–06–2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 797 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು)

## ಸಹಕಾರ ಸಚಿವಾಲಯ

**ವಿಷಯ :** ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ಇದರ 2008–09 ರಿಂದ 2011–12ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ಜರುಗಿಸಲು ಅವಕಾಶ ನೀಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಇ 15 ಸಸಕಾ. 2011, ದಿನಾಂಕ: 19–09–2011.

2. ಅಧ್ಯಕ್ಷರು, ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ರವರ ಪತ್ರ ಸಂಖ್ಯೆ: ಎಂಸಿಎಸ್‌ಎಂ–ವಾ.ಮ.ಸಭೆ–2011–12–194, ದಿ: 06–02–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ಇದರ 2008–09, 2009–10 ಮತ್ತು 2010–11ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ದಿನಾಂಕ: 31–03–2012 ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಇನ್ನು ಮುಂದೆ ಯಾವುದೇ ತರಹದ ವಿಸ್ತರಣೆ ನೀಡಲಾಗುವುದಿಲ್ಲವೆಂದು ಸೂಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ರವರು ಇತ್ತೀಚೆಗೆ ಸಂಭವಿಸಿರುವ ಅತಿವೃಷ್ಟಿ, ಹಳ್ಳಿಗಳ ಸಂಪರ್ಕ ರಸ್ತೆ ಹಾಳಾಗಿರುವುದು, ರೈತ ಸದಸ್ಯರು ಸುಗ್ಗಿ ಹಾಗೂ ಕೃಷಿ ಚಟುವಟಿಕೆಗಳಲ್ಲಿ ಮಗ್ನರಾಗಿರುವುದು ಎನ್‌ಸಿಡಿಸಿ ಸಂಸ್ಥೆಯಿಂದ ಮಂಜೂರು ಮಾಡಿರುವ ಅವಧಿ ಸಾಲದ ಬಗ್ಗೆ ಸರ್ಕಾರದ ನಿಬಂಧನೆಯ ಪ್ರಕಾರ ಹೆಚ್ಚಿನ ಪಾಲು ಬಂಡವಾಳವನ್ನು ಕ್ರೋಢೀಕರಿಸುವಲ್ಲಿ ಕಾರ್ಖಾನೆಯ ಆಡಳಿತ ಮಂಡಳಿಯವರು ಹಾಗೂ ಸಿಬ್ಬಂದಿ ವರ್ಗದವರು ಕಾರ್ಯಮಗ್ನರಾಗಿರುವುದು ಮತ್ತು ಸದ್ಯ ಕಾರ್ಖಾನೆಯ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದಿರುವ ಕಾರಣದಿಂದ ದಿನಾಂಕ: 06–02–2012ರಂದು ಜರುಗಿದ ಆಡಳಿತ ಮಂಡಳಿ ಸಭೆಯ ನಿರ್ಣಯದಂತೆ ಕಾರ್ಖಾನೆಯ 2008–09 ರಿಂದ 2011–12ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 31–03–2012ರವರೆಗೆ ನೀಡಿರುವ ಕಾಲಾವಕಾಶವನ್ನು ದಿನಾಂಕ: 30–09–2012 ರವರೆಗೆ ವಿಸ್ತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 8 ಸಸಕಾ 2012, ಬೆಂಗಳೂರು, ದಿನಾಂಕ 23–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ಇದರ 2008–09 ರಿಂದ 2011–12ರ ಸಾಲಿನ ವಾರ್ಷಿಕ ಮಹಾಸಭೆಗಳನ್ನು ದಿನಾಂಕ: 30–09–2012 ರೊಳಗಾಗಿ ಜರುಗಿಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 27(1) ಹಾಗೂ ಪ್ರಕರಣ 121(1)ರ ಅಡಿಯಲ್ಲಿ ಇದು ಅಂತಿಮ ಅವಕಾಶ ಎಂಬ ಷರತ್ತನ್ನು ವಿಧಿಸಿ ಕಾಲಾವಕಾಶ ನೀಡಲಾಗಿದೆ.

**ಸೂಚನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿ: 30/09/2012ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಸತೀಶ್**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 798

## ಸಹಕಾರ ಸಚಿವಾಲಯ

**ವಿಷಯ :** ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ಇದರ ಆಡಳಿತ ಮಂಡಳಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಇ 14 ಸಸಕಾ. 2011, ದಿನಾಂಕ: 09–09–2011.

2. ಅಧ್ಯಕ್ಷರು, ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ರವರ ಪತ್ರ ಸಂಖ್ಯೆ: ಎಂಸಿಎಸ್‌ಎಂ–ಅ.ಮಂ.ಚು.–2011–12–193, ದಿ: 06–02–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ಇದರ ಆಡಳಿತ ಮಂಡಳಿಯ ಚುನಾವಣೆಯನ್ನು ದಿನಾಂಕ: 31–03–2012 ರೊಳಗೆ ನಡೆಸುವಂತೆ ಆದೇಶಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ರವರು ಇತ್ತೀಚೆಗೆ ಸಂಭವಿಸಿರುವ ಅತಿವೃಷ್ಟಿ, ಹಳ್ಳಿಗಳ ಸಂಪರ್ಕ ರಸ್ತೆ ಹಾಳಾಗಿರುವುದು, ರೈತ ಸದಸ್ಯರು ಸುಗ್ಗಿ ಹಾಗೂ ಕೃಷಿ ಚಟುವಟಿಕೆಗಳಲ್ಲಿ ಮಗ್ನರಾಗಿರುವುದು ಎನ್‌ಸಿಡಿಸಿ ಸಂಸ್ಥೆಯಿಂದ ಮಂಜೂರು ಮಾಡಿರುವ ಅವಧಿ ಸಾಲದ ಬಗ್ಗೆ ಸರ್ಕಾರದ ನಿಬಂಧನೆಯ ಪ್ರಕಾರ ಹೆಚ್ಚಿನ ಪಾಲು ಬಂಡವಾಳವನ್ನು ಕ್ರೋಢೀಕರಿಸುವಲ್ಲಿ ಕಾರ್ಖಾನೆಯ ಆಡಳಿತ ಮಂಡಳಿಯವರು ಹಾಗೂ ಸಿಬ್ಬಂದಿ ವರ್ಗದವರು ಕಾರ್ಯಮಗ್ನರಾಗಿರುವುದು ಮತ್ತು ಸದ್ಯ ಕಾರ್ಖಾನೆಯ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದಿರುವ ಕಾರಣದಿಂದ ದಿನಾಂಕ: 06–02–2012ರಂದು ಜರುಗಿದ ಆಡಳಿತ ಮಂಡಳಿ ಸಭೆಯ

ನಿರ್ಣಯದಂತೆ ಕಾರ್ಖಾನೆಯ ಆಡಳಿತ ಮಂಡಳಿಯ ಚುನಾವಣೆಯನ್ನು ನಡೆಸಲು ದಿನಾಂಕ: 31-03-2012ರವರೆಗೆ ನೀಡಿರುವ ಕಾಲಾವಕಾಶವನ್ನು ದಿನಾಂಕ: 30-09-2012 ರವರೆಗೆ ವಿಸ್ತರಿಸಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 7 ಸಸಕಾ 2012, ಬೆಂಗಳೂರು, ದಿನಾಂಕ 24-02-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಜಿಲ್ಲೆ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ನ್ನು ಮಾರ್ಪಾಟು ಮಾಡಿ ಸದರಿ ಕಾರ್ಖಾನೆಯ ಆಡಳಿತ ಮಂಡಳಿಯ ಚುನಾವಣೆಯನ್ನು ದಿನಾಂಕ: 30-09-2012ರೊಳಗಾಗಿ ಜರುಗಿಸಲು ಅನುಮತಿ ನೀಡಲಾಗಿದೆ.

**ಸೂಚನೆ :**

ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿ: 30/09/2012ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಸಿ. ಸತೀಶ್**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 799

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ: 31-03-2012ರೊಳಗೆ ನಡೆಸಬೇಕಾಗಿರುವ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಇದರ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** 1. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು, ರವರ ಪತ್ರ ಸಂಖ್ಯೆ: ಜಿಇಎ/459/2011-12 ದಿನಾಂಕ: 14-02-2012.

2. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ. ಬೆಂಗಳೂರು ರವರ ಪತ್ರ ಸಂಖ್ಯೆ; ಕರಾಸನೌಗೃಹನಿಸಸಂನಿ/733/2011-12 ದಿನಾಂಕ: 5-1-2012

**ಪ್ರಸ್ತಾವನೆ :**

ಮೇಲೆ ಓದಲಾದ 1 ಮತ್ತು 2ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಮತ್ತು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘದ ಪತ್ರಗಳಲ್ಲಿ ತಿಳಿಸಿದಂತೆ ಗೃಹ ನಿರ್ಮಾಣ ಸಂಘದ ಚುನಾವಣೆಯನ್ನು ದಿನಾಂಕ: 31-03-2012ರ ಒಳಗೆ ನಡೆಸಬೇಕಾಗಿದ್ದು, ಬಡಾವಣೆ ಕಾಮಗಾರಿ ಕೆಲಸ ಬಹುತೇಕ ಪೂರ್ಣಗೊಳ್ಳುವ ಹಂತ ತಲುಪಿದ್ದು ಅರ್ಹ ಸದಸ್ಯರಿಗೆ ನಿವೇಶನ ಹಂಚಿಕೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಈ ಹಂತದಲ್ಲಿ ಚುನಾವಣೆ ಜರುಗಿಸಿದರೆ ಎಲ್ಲಾ ಅಭಿವೃದ್ಧಿ ಕೆಲಸಗಳು ಸ್ಥಗಿತಗೊಂಡು ಸದಸ್ಯರಿಗೆ ಅನಾನುಕೂಲ ಉಂಟಾಗುತ್ತದೆ ಆದುದರಿಂದ ದಿನಾಂಕ: 31-03-2012 ರಿಂದ 30-09-2012 ರ ಒಳಗೆ ಆರು ತಿಂಗಳ ಅವಧಿಗೆ ವಿಸ್ತರಿಸಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 28 ಸಿಎಲ್ಎಂ 2012, ಬೆಂಗಳೂರು, ದಿನಾಂಕ 24-02-2012**

ಮೇಲಿನ ಪರಿಸ್ಥಿತಿಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಅನ್ನು ಮಾರ್ಪಾಡು ಮಾಡಿ ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ 30-09-2012 ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ :**

ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30-09-2012 ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಸಿ. ಸತೀಶ್**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 800

## ಕಾರ್ಮಿಕ ಸಚಿವಾಲಯ

**ವಿಷಯ :** 2008–09ನೇ ಸಾಲಿನಲ್ಲಿ ಪ್ರಾರಂಭಿಸಲಾದ 10 ಹೊಸ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಅವಶ್ಯಕ ಹುದ್ದೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಕಾಇ 287 ಇಟಿಐ 2008(ಭಾಗ) ದಿನಾಂಕ: 06/09/2008.

2. ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂ. ಉತನಿ/ತ/ಯೋ–2/ವಿವ–06/2009–10 ದಿನಾಂಕ: 13/01/2012ಕ್ಕೆ ಅಂತ್ಯಗೊಂಡ ಪತ್ರ ವ್ಯವಹಾರ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2008–09ನೇ ಸಾಲಿನಲ್ಲಿ ರಾಜ್ಯದ ಒಟ್ಟು 10 ಸ್ಥಳಗಳಲ್ಲಿ ಹೊಸ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರಗಳಲ್ಲಿ 2008–09ನೇ ಸಾಲಿನಲ್ಲಿ ಹೊಸದಾಗಿ ಪ್ರಾರಂಭಿಸಿದ 10 ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಅವಶ್ಯಕವಾದ 500 ವಿವಿಧ ದರ್ಜೆಯ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ನಂತರ ಆರ್ಥಿಕ ಇಲಾಖೆಯ ಸಹಮತಿಯಂತೆ ಪ್ರತಿ ಕೈಗಾರಿಕಾ ತರಬೇತಿ ಸಂಸ್ಥೆಗೆ 25 ಹುದ್ದೆಗಳಂತೆ 250 ಹುದ್ದೆಗಳನ್ನು ಸೃಜಿಸಲು ಮತ್ತು ಈ ಹುದ್ದೆಗಳನ್ನು ಕೈಗಾರಿಕಾ ತರಬೇತಿ ಸಂಸ್ಥೆಯ ಅವಶ್ಯಕತೆಗೆ ತಕ್ಕಂತೆ ವೃಂದವಾರು ವರ್ಗೀಕರಿಸಿ ತಿಳಿಸಲು ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರಿಗೆ ತಿಳಿಸಲಾಗಿತ್ತು. ಇದಕ್ಕೆ ಸಂಬಂಧಿಸಿದಂತೆ ಆಯುಕ್ತರು, ಪ್ರತಿ ಕೈಗಾರಿಕಾ ತರಬೇತಿ ಸಂಸ್ಥೆಗೆ 25 ಹುದ್ದೆಗಳಿಗೆ ಮಿತಿಗೊಳಿಸಿದಲ್ಲಿ ಕೆಲವೊಂದು ಸಂಸ್ಥೆಗಳಲ್ಲಿ ಕೆಲವು ವೃತ್ತಿಗಳಿಗೆ ತರಬೇತಿ ಘಟಕಗಳನ್ನು ಅನುಷ್ಠಾನಗೊಳಿಸುವುದು ಸಾಧ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆ ತರಬೇತಿ ಘಟಕಗಳಿಗೆ ಅನುಗುಣವಾಗಿ ಕೆಲವಕ್ಕೆ 25ಕ್ಕಿಂತ ಕಡಿಮೆ ಹಾಗೂ ಕೆಲವಕ್ಕೆ 25ಕ್ಕಿಂತ ಹೆಚ್ಚು, ಹುದ್ದೆಗಳು ಬೇಕಾಗಿದ್ದು. ಆ ಪ್ರಕಾರ 10 ಕೈಗಾರಿಕಾ ತರಬೇತಿ ಸಂಸ್ಥೆಗಳ ಒಟ್ಟು ಹುದ್ದೆಗಳು ಸರ್ಕಾರದ ನಿರ್ದೇಶನದಂತೆ 250ನ್ನು ಮೀರದಂತೆ ವರ್ಗೀಕರಿಸಿ ಕಳುಹಿಸಿದ್ದು. ಇದಕ್ಕೆ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಆಯುಕ್ತರು ನೀಡಿರುವ ಕಾರಣವನ್ನು ಪರಿಗಣಿಸಿ ವರ್ಗೀಕರಿಸಿ ಕಳುಹಿಸಿರುವ ಪ್ರಸ್ತಾವನೆಯನ್ನು ಒಪ್ಪಿಕೊಂಡು ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 379 ಇಟಿಐ 2008(ಭಾಗ–1), ಬೆಂಗಳೂರು, ದಿನಾಂಕ 22–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2008–09ನೇ ಸಾಲಿನಲ್ಲಿ ಹೊಸದಾಗಿ ಪ್ರಾರಂಭಿಸಿದ 10 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಒಟ್ಟು 250 ಹುದ್ದೆಗಳಿಗೆ ಸೀಮಿತಗೊಳಿಸಿ ಈ ಕೆಳಗಿನಂತೆ ಹುದ್ದೆಗಳನ್ನು ಸೃಜಿಸಿ ಮಂಜೂರಾತಿ ನೀಡಲಾಗಿದೆ.

| 1 | ಹುಬ್ಬಳ್ಳಿ –ಧಾರವಾಡ | | | | | | | | | | |
|---|---|---|---|---|---|---|---|---|---|---|---|
| ಕ್ರ. ಸಂ. | | PPL-1 | TO | AO | JTO | OS | FDA | SDA | Typist | W.A | GD | Total |
| 1 | Electrician | 1 | 2 | 1 | 2 | 1 | 3 | 2 | 1 | 1 | 2 | |
| 2 | Fitter | | | | 2 | | | | | | | |
| 3 | MMV | | | | 2 | | | | | | | |
| 4 | IT & ESM | | | | 2 | | | | | | | |
| 5 | E/M | | | | 2 | | | | | | | |
| 6 | Welder | | | | 1 | | | | | | | |
| 7 | Mech. Diesel | | | | 1 | | | | | | | |
| 8 | Dress Making | | | | 1 | | | | | | | |
| 9 | Architectural Assistant | | | | 1 | | | | | | | |
| | ಒಟ್ಟು | 1 | 2 | 1 | 14+2 | 1 | 3 | 2 | 1 | 1 | 2 | 30 |

| 2 | ಅಂಕೋಲ | | | | | | | | | | |
|---|---|---|---|---|---|---|---|---|---|---|---|
| ಕ್ರ.ಸ | | PPL-1 | TO | AO | JTO | OS | FDA | SDA | Typist | W.A | GD | Total |
| 1 | ¯E/N | 1 | 2 | 1 | 2 | 1 | 3 | 2 | 1 | 1 | 2 | |
| 2 | E/M | | | | 2 | | | | | | | |
| 3 | Fitter | | | | 2 | | | | | | | |
| 4 | IT & ESM | | | | 2 | | | | | | | |
| 5 | MMV | | | | 2 | | | | | | | |
| 6 | Architectural Assistant | | | | 1 | | | | | | | |
| 7 | Dress Making | | | | 1 | | | | | | | |
| 8 | Welder | | | | 1 | | | | | | | |
| | ಒಟ್ಟು | 1 | 2 | 1 | 13+2 | 1 | 3 | 2 | 1 | 1 | 2 | 29 |

| 3 | ಸಿದ್ದಾಪುರ | | | | | | | | | | |
|---|---|---|---|---|---|---|---|---|---|---|---|
| ಕ್ರ. ಸಂ. | | PPL-II | TO | AO | JTO | OS | FDA | SDA | Typist | W.A | GD | Total |
| 1 | E/N | 1 | 2 | 0 | 2 | 1 | 3 | 2 | 1 | 1 | 2 | |
| 2 | Fitter | | | | 2 | | | | | | | |
| 3 | E/M | | | | 2 | | | | | | | |
| 4 | MMV | | | | 2 | | | | | | | |
| 5 | IT/ESM | | | | 2 | | | | | | | |
| 6 | Diesel Mechanic | | | | 1 | | | | | | | |
| 7 | Welder | | | | 1 | | | | | | | |
| | ಒಟ್ಟು | 1 | 2 | 0 | 12+1 | 1 | 3 | 2 | 1 | 1 | 2 | 26 |

| 4 | ಕೊರಟಗೆರೆ | | | | | | | | | | | |
|---|---|---|---|---|---|---|---|---|---|---|---|---|
| ಕ್ರ. ಸಂ. | | PPL-II | TO | AO | JTO | OS | FDA | SDA | Typist | W.A | GD | Total |
| 1 | E/N | 1 | 2 | 0 | 2 | 1 | 3 | 2 | 1 | 1 | 2 | |
| 2 | E/M | | | | 2 | | | | | | | |
| 3 | Fitter | | | | 2 | | | | | | | |
| 4 | IT/ESM | | | | 2 | | | | | | | |
| 5 | MmV | | | | 2 | | | | | | | |
| 6 | Welder | | | | 1 | | | | | | | |
| 7 | Diesel Mechanic | | | | 1 | | | | | | | |
| | ಒಟ್ಟು | 1 | 2 | 0 | 12+1 | 1 | 3 | 2 | 1 | 1 | 2 | 26 |
| 5 | ಸೊರಬ | | | | | | | | | | | |
| ಕ್ರ.ಸಂ | | PPL-II | TO | AO | JTO | OS | FDA | SDA | Typist | W.A | GD | Total |
| 1 | E/N | 1 | 1 | 0 | 2 | 1 | 2 | 1 | 1 | 1 | 2 | |
| 2 | Fitter | | | | 2 | | | | | | | |
| 3 | E/M | | | | 2 | | | | | | | |
| 4 | IT/ESM | | | | 2 | | | | | | | |
| 5 | MMV | | | | 2 | | | | | | | |
| | ಒಟ್ಟು | 1 | 1 | 0 | 10+1 | 1 | 2 | 1 | 1 | 1 | 2 | 21 |

| 6 | ಹೊಸಕೋಟೆ | | | | | | | | | | | |
|---|---|---|---|---|---|---|---|---|---|---|---|---|
| ಕ್ರ. ಸಂ. | | PPL-1 | TO | AO | JTO | OS | FDA | SDA | Typist | W.A | GD | Total |
| 1 | Fitter | 1 | 2 | 3 | 2 | 1 | 3 | 2 | 1 | 1 | 3 | |
| 2 | E/M | | | | 2 | | | | | | | |
| 3 | E/N | | | | 2 | | | | | | | |
| 4 | MmV | | | | 2 | | | | | | | |
| 5 | IT& ESM | | | | 2 | | | | | | | |
| 6 | Mech. Diesel | | | | 1 | | | | | | | |
| 7 | Welder | | | | | | | | | | | |
| 8 | Achitectural Assistant | | | | | | | | | | | |
| 9 | Dress Making | | | | 1 | | | | | | | |
| | ಒಟ್ಟು | 1 | 2 | 1 | 12+2 | 1 | 3 | 2 | 1 | 1 | 3 | 29 |

| 7 | ಕೊಪ್ಪ | | | | | | | | | | |
|---|---|---|---|---|---|---|---|---|---|---|---|
| ಕ್ರ.ಸಂ | | PPL-II | TO | AO | JTO | OS | FDA | SDA | Typist | W.A | GD | Total |
| 1 | E/M | 1 | 0 | 0 | 2 | 1 | 2 | 1 | 1 | 1 | 1 | |
| 2 | E/N | | | | 2 | | | | | | | |
| 3 | MMV | | | | 2 | | | | | | | |
| | ಒಟ್ಟು | 1 | 0 | 0 | 6+1 | 1 | 2 | 1 | 1 | 1 | 1 | 15 |

| 8 | ಗುಡಿಬಂಡೆ | | | | | | | | | | | |
|---|---|---|---|---|---|---|---|---|---|---|---|---|
| ಕ್ರ.ಸಂ | | PPL-II | TO | AO | JTO | OS | FDA | SDA | Typist | W.A | GD | Total |
| 1 | E/N | 1 | 0 | 0 | 2 | 1 | 2 | 1 | 1 | 1 | 1 | |
| 2 | E/M | | | | 2 | | | | | | | |
| 3 | Fitter | | | | 2 | | | | | | | |
| | ಒಟ್ಟು | 1 | 0 | 0 | 6+1 | 1 | 2 | 1 | 1 | 1 | 1 | 15 |

| 9 | ಸಾಗರ | | | | | | | | | | | |
|---|---|---|---|---|---|---|---|---|---|---|---|---|
| ಕ್ರ.ಸಂ | | PPL-1 | TO | AO | JTO | OS | FDA | SDA | Typist | W.A | GD | Total |
| 1 | E/N | 1 | 2 | 1 | 2 | 1 | 3 | 2 | 1 | 1 | 2 | |
| 2 | E/M | | | | 2 | | | | | | | |
| 3 | IT& ESM | | | | 2 | | | | | | | |
| 4 | MMV | | | | 2 | | | | | | | |
| 5 | Fitter | | | | 2 | | | | | | | |
| 6 | Diesel Mechanic | | | | 1 | | | | | | | |
| 7 | Welder | | | | 1 | | | | | | | |
| 8 | Dress making | | | | 1 | | | | | | | |
| | ಒಟ್ಟು | 1 | 2 | 1 | 13+2 | 1 | 3 | 2 | 1 | 1 | 2 | 29 |

| 10 | ಶಿಗ್ಗಾಂ | | | | | | | | | | | |
|---|---|---|---|---|---|---|---|---|---|---|---|---|
| ಕ್ರ.ಸಂ | | PPL-1 | TO | AO | JTO | OS | FDA | SDA | Typist | W.A | GD | Total |
| 1 | E/N | 1 | 2 | 1 | 2 | 1 | 3 | 2 | 1 | 1 | 2 | |
| 2 | Fitter | | | | 2 | | | | | | | |
| 3 | MMV | | | | 2 | | | | | | | |
| 4 | IT& ESM | | | | 2 | | | | | | | |
| 5 | E/M | | | | 2 | | | | | | | |
| 6 | Diesel Mechanic | | | | 1 | | | | | | | |
| 7 | Welder | | | | 1 | | | | | | | |
| 8 | Dress making | | | | 1 | | | | | | | |
| 9 | AA | | | | 1 | | | | | | | |
| | ಒಟ್ಟು | 1 | 2 | 1 | 14+2 | 1 | 3 | 2 | 1 | 1 | 2 | 30 |
| | | | | | | | | | | | | ಒಟ್ಟು 250 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 492 ವೆಚ್ಚ–9/2011 ದಿನಾಂಕ: 05/11/2011 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಜೆ.ಎಸ್. ವಿಶ್ವನಾಥಪ್ಪ**

ಪೀಠಾಧಿಕಾರಿ

ಕಾರ್ಮಿಕ ಇಲಾಖೆ

(ಉದ್ಯೋಗ ಮತ್ತು ತರಬೇತಿ)

ಪಿ.ಆರ್. 801

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಹಾವೇರಿ ತಾಲ್ಲೂಕು ಎಕ್ಕುಂಬಿ – ಮೊಳಕಾಲ್ಮೂರು ರೈಲು ಮಾರ್ಗದಲ್ಲಿನ ಎಲ್‌ಸಿ ಸಂಖ್ಯೆ– 237ರ ಬದಲಾಗಿ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ. ಲೋಇ 30 ಸಿಬಿಆರ್ 2010 ದಿನಾಂಕ 04–08–2010.
2. ಸರ್ಕಾರದ ಆದೇಶ ಸಂ. ಲೋಇ 222 ಸಿಎನ್‌ಹೆಚ್ 2010 ದಿನಾಂಕ 16–11–2010.
3. ಸರ್ಕಾರದ ಆದೇಶ ಸಂಖ್ಯೆ. ಮೂಅಇ 122 ರಾರಾಹೆ 2009 ಬೆಂಗಳೂರು, ದಿನಾಂಕ 16–07–2011.
4. ಸರ್ಕಾರದ ಆದೇಶ ಸಂಖ್ಯೆ. ಮೂಅಇ 122 ರಾರಾಹೆ 2009 ಬೆಂಗಳೂರು, ದಿನಾಂಕ 30–08–2011.
5 ಸರ್ಕಾರದ ಆದೇಶ ಸಂಖ್ಯೆ. ಮೂಅಇ 112 ರಾರಾಹೆ 2009 ಬೆಂಗಳೂರು, ದಿನಾಂಕ 23–09–2011.
6. ಸರ್ಕಾರದ ಆದೇಶ ಸಂಖ್ಯೆ. ಮೂಅಇ 122 ರಾರಾಹೆ 2009 ಬೆಂಗಳೂರು, ದಿನಾಂಕ 15–12–2011.
7. ಪತ್ರ ಸಂ: ಕಾನಿಇಂ/ಲೋಇಹಾ/ಲೋಇ/ಭೂಸ್ವಾ/ಎಬಿ–4/2011–2012/3818 ದಿನಾಂಕ 29–12–2011 ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಹಾವೇರಿ ಇವರಿಂದ.
8. ಸರ್ಕಾರಿ ಆದೇಶ ಸಂಖ್ಯೆ. ಆಇ 200 ಬಿಆರ್‌ಎಸ್ 2011, ಬೆಂಗಳೂರು, ದಿನಾಂಕ 03–02–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಹಾವೇರಿ ತಾಲ್ಲೂಕು ಎಕ್ಕುಂಬಿ – ಮೊಳಕಾಲ್ಮೂರು ರೈಲು ಮಾರ್ಗದಲ್ಲಿ ಬರುವ ಎಲ್‌ಸಿ ಸಂಖ್ಯೆ–237 ರ ಬದಲಾಗಿ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣಕ್ಕೆ ಮೆ.ರೈಟ್ಸ್ ಸಂಸ್ಥೆಯು ತಯಾರಿಸಿರುವ ರೂ. 23.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಹಾಗೂ ರೈಲ್ವೆ ಮಂತ್ರಾಲಯ ಶೇಕಡ 50:50 ರಷ್ಟು ವೆಚ್ಚವನ್ನು ಭರಿಸುವ ಷರತ್ತಿಗೊಳಪಟ್ಟು ಲೋಕೋಪಯೋಗಿ ಇಲಾಖೆಯು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

2. ಮೇಲೆ ಓದಲಾದ ಕ್ರ.ಸಂ. (2)ರ ಆದೇಶದಲ್ಲಿ ಲೋಕೋಪಯೋಗಿ ಇಲಾಖೆಯು ಕಾಮಗಾರಿಯನ್ನು ರೂ. 22.01 ಕೋಟಿಗಳಿಗೆ ಗುತ್ತಿಗೆಯನ್ನು ಗುತ್ತಿಗೆದಾರರಾದ ಶ್ರೀ ರಾಜಣ್ಣ ಶಿವಕುಮಾರ್ ಇವರಿಗೆ ವಹಿಸಿದೆ.

3. ಮೇಲೆ ಓದಲಾದ ಕ್ರ.ಸಂ. 3, 4 ಮತ್ತು 6ರ ಸರ್ಕಾರಿ ಆದೇಶಗಳಲ್ಲಿ ಕ್ರಮವಾಗಿ ರೂ. 500.00 ರೂ. 300.00 ಲಕ್ಷಗಳನ್ನು ಮತ್ತು ರೂ. 77,20,000.00 ಒಟ್ಟು ರೂ. 8,77,20,000/– (ರೂಪಾಯಿ ಎಂಟು ಕೋಟಿ ಎಪ್ಪತ್ತೇಳು ಲಕ್ಷ ಇಪ್ಪತ್ತು ಸಾವಿರ ಮಾತ್ರ) ಲಕ್ಷಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಹಾವೇರಿ ಇವರಿಗೆ ಬಿಡುಗಡೆ ಮಾಡಲಾಗಿದೆ.

4. ಮೇಲೆ ಓದಲಾದ ಕ್ರ.ಸಂ. (5)ರ ಸರ್ಕಾರದ ಪತ್ರದಲ್ಲಿ ಮುಖ್ಯ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಸಂಪರ್ಕ ಮತ್ತು ಕಟ್ಟಡ (ಉ), ಧಾರವಾಡ ಇವರಿಗೆ ಬರೆದಿರುವ ಪತ್ರದಲ್ಲಿ ಎಲ್.ಸಿ ಸಂ. 237ರ ಮೇಲು ಸೇತುವೆಯ ಕೂಡು ರಸ್ತೆ ನಿರ್ಮಾಣಕ್ಕೆ ಬಿಡುಗಡೆಗೊಳಿಸಿರುವ ಅನುದಾನದಲ್ಲಿ ಯಾವ ಯಾವ ಕಾಮಗಾರಿಗೆ ಎಷ್ಟು ಮೊತ್ತ ವೆಚ್ಚ ಮಾಡಿರುವ ವಿವರಗಳು ಹಾಗೂ ಕಾಮಗಾರಿಯ ಭೌತಿಕ ಪ್ರಗತಿಯ ಪೂರ್ಣ ವಿವರಗಳನ್ನು ಕಳುಹಿಸುವಂತೆ ಕೋರಲಾಗಿತ್ತು. ಆದರೆ ಮುಖ್ಯ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಸಂಪರ್ಕ ಮತ್ತು ಕಟ್ಟಡ (ಉ), ಧಾರವಾಡ ಇವರಿಂದ ಮಾಹಿತಿ ಸ್ವೀಕೃತವಾಗಿಲ್ಲ.

5. ಮೇಲೆ ಓದಲಾದ ಕ್ರ.ಸಂ. (7)ರ ಪತ್ರದಲ್ಲಿ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಹಾವೇರಿ, ಇವರು ಕಾಮಗಾರಿಯ ಡೆಕ್ ಸ್ಲ್ಯಾಬ್ ಪ್ರಗತಿಯಲ್ಲಿರುತ್ತದೆಂದು ಗುತ್ತಿಗೆದಾರರಿಗೆ ಎರಡನೇ ಭಾಗಶಃ ಬಿಲ್ಲು ರೂ. 600.00 ಲಕ್ಷಗಳ ಮೊತ್ತವನ್ನು ಪಾವತಿಸುವುದು ಬಾಕಿ ಇರುವುದರಿಂದ ರೂ. 272.80 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

6. ಮೇಲೆ ಓದಲಾದ ಕ್ರ.ಸಂ. (8)ರಲ್ಲಿ ಆರ್ಥಿಕ ಇಲಾಖೆಯು 2011–12ನೇ ಸಾಲಿನ ಆಯವ್ಯಯದ ರಸ್ತೆ ಕೆಳ ಸೇತುವೆ/ಮೇಲು ಸೇತುವೆ ಲೆಕ್ಕ ಶೀರ್ಷಿಕೆ 5465–01–190–3–04–211–ಬಂಡವಾಳ, ಇದರಡಿಯಲ್ಲಿ ಒದಗಿಸಿರುವ ರೂ. 21.49 ಕೋಟಿಗಳ ಮೊತ್ತವು ಸಂಪೂರ್ಣವಾಗಿ ವೆಚ್ಚವಾಗಿರುವುದರಿಂದ ಬೆಂಗಳೂರು ಕಮ್ಯುಟರ್ ರೈಲ್ ಸರ್ವೀಸ್ ಲೆಕ್ಕ ಶೀರ್ಷಿಕೆ 5465–01–190–3–07–211 ಬಂಡವಾಳ, ಇದರಡಿಯಲ್ಲಿ ಒದಗಿಸಿರುವ ರೂ. 5.00 ಕೋಟಿಗಳಿಂದ ಮರುಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲು ಆದೇಶವನ್ನು ಹೊರಡಿಸಿದೆ.

7. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 122 ರಾರಾಹೆ 2009, ಬೆಂಗಳೂರು, ದಿನಾಂಕ 23–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಾವೇರಿ ತಾಲ್ಲೂಕು ಎಕ್ಕುಂಬಿ – ಮೊಳಕಾಲ್ಮೂರು ರೈಲು ಮಾರ್ಗದಲ್ಲಿ ಬರುವ ಎಲ್‌ಸಿ ಸಂಖ್ಯೆ 237ರ ಬದಲಾಗಿ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ರಾಜ್ಯ ಸರ್ಕಾರದ ಪಾಲಿನ ಮೊತ್ತ (ಶೇಕಡ 50ರಷ್ಟು) ರೂ. 272.80 ಲಕ್ಷಗಳನ್ನು (ಇನ್ನೂರ ಎಪ್ಪತ್ತೆರಡು ಲಕ್ಷದ ಎಂಬತ್ತು ಸಾವಿರ ರೂಪಾಯಿಗಳು ಮಾತ್ರ) ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಹಾವೇರಿ ವಿಭಾಗ, ಇವರಿಗೆ ಬಿಡುಗಡೆ ಮಾಡಿದೆ.

2. ಈ ಮೊತ್ತವನ್ನು 2011–12 ನೇ ಸಾಲಿನ ಆಯವ್ಯಯದ ಬೆಂಗಳೂರು ಕಮ್ಯುಟರ್ ರೈಲ್ ಸರ್ವೀಸ್ ಲೆಕ್ಕ ಶೀರ್ಷಿಕೆ 5465–01–190–3–07–211 ಬಂಡವಾಳ, ಇದರಡಿಯಲ್ಲಿ ಒದಗಿಸಿರುವ ರೂ. 5.00 ಕೋಟಿಗಳಿಂದ ಮರುಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲಾಗಿದೆ.

3. ಈ ಹಣವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಹಾವೇರಿ ವಿಭಾಗ, ಇವರು ಜಿಲ್ಲಾ ಖಜಾನೆ ಹಾವೇರಿ ಇಲ್ಲಿ ಡ್ರಾ ಮಾಡಲು ಅಧಿಕರಿಸಿದೆ. ಉಪ ನಿರ್ದೇಶಕರು, ಎನ್.ಎಂ.ಸಿ. ಬೆಂಗಳೂರು ಇವರು ಕಾರ್ಯಪಾಲಕ ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಹಾವೇರಿ ವಿಭಾಗ ಇವರ ಖಾತೆಗೆ ಅಪ್‌ಲೋಡ್

ಮಾಡುವುದು. ಈ ಹಣವನ್ನು ಯೋಜನೆಗೆ ವೆಚ್ಚ ಮಾಡಿ ಉಪಯೋಗಿತಾ ಪ್ರಮಾಣ ಪತ್ರವನ್ನು ಕಾರ್ಯಪಾಲಕ ಅಭಿಯಂತರರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡ (ಉತ್ತರ) ಧಾರವಾಡ/ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಹಾವೇರಿ ವಿಭಾಗ, ಹಾವೇರಿ ಇವರು ಕಾಮಗಾರಿಯ ಭೌತಿಕ ಪ್ರಗತಿಯ ವಿವರಗಳು/ ಅನುದಾನದ ವೆಚ್ಚದ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: FD 121 EXP 1/2012 ದಿನಾಂಕ: 07–02–2012ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ಜಿ. ಸಂಪತ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 802

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಪಿ.ವೈ. ಜಾಲಗಾರ್, ನಿವೃತ್ತ ಅಭಿಯೋಗ ಉಪ ನಿರ್ದೇಶಕರು, ಸಿ.ಆರ್.ಇ. ಸೆಲ್, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಸೌಲಭ್ಯಕ್ಕೆ ಪರಿಗಣಿಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ–II, ಸಂ: ಲಾ 123 ಪಿಪಿಇ 85, ದಿನಾಂಕ: 13–06–1986.
2. ಸರ್ಕಾರದ ಆದೇಶ ಸಂಖ್ಯೆ: ಲಾ 14 ಪಿಪಿಇ 87, ದಿನಾಂಕ: 21/23–01–1987.
3. ಶ್ರೀ ಪಿ.ವೈ. ಜಾಲಗಾರ್‌ರವರ ಮನವಿಯ ದಿನಾಂಕ: 20–06–2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/108/2008–2009, ದಿನಾಂಕ: 12–01–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 13–06–1986ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:04ರ ಅನ್ವಯ ಶ್ರೀ ಪಿ.ವೈ. ಜಾಲಗಾರ್, ನಿವೃತ್ತ ಅಭಿಯೋಗ ಉಪ ನಿರ್ದೇಶಕರು, ಸಿ.ಆರ್.ಇ. ಸೆಲ್, ಬೆಂಗಳೂರು ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 26–06–1986 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ: 21/23–01–1987ರ ಸರ್ಕಾರದ ಆದೇಶದನ್ವಯ ಇವರ ಜನ್ಮ ದಿನಾಂಕವನ್ನು 12–11–1951 ಎಂದು ಒಪ್ಪಲಾಗಿದೆ. ಮೇಲೆ (3)ರಲ್ಲಿ ಓದಲಾದ ದಿನಾಂಕ: 20–06–2008ರ ಮನವಿಯಲ್ಲಿ ಶ್ರೀ ಪಿ.ವೈ. ಜಾಲಗಾರ್‌ರವರು ಅವರು 34 ವರ್ಷ 07 ತಿಂಗಳು ಮತ್ತು 14 ದಿನಗಳಾಗಿದ್ದಾಗ ಸರ್ಕಾರಿ ಸೇವೆಗೆ ಸೇರಿದ್ದು, ನಿಯಮಾನುಸಾರ ಗರಿಷ್ಠ ಮಿತಿಯ 04 ವರ್ಷಗಳ ಹೆಚ್ಚುವರಿ ಸೇವಾ ಸೌಲಭ್ಯಕ್ಕೆ ಅರ್ಹರಿದ್ದು, ಪರಿಗಣಿಸುವಂತೆ ಕೋರಿರುತ್ತಾರೆ. ಮೇಲೆ (4)ರಲ್ಲಿ ಓದಲಾದ ದಿನಾಂಕ: 12–01–2012ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರುರವರು ಶ್ರೀ ಪಿ.ವೈ. ಜಾಲಹಗಾರ್‌ರವರು 34 ವರ್ಷ 07 ತಿಂಗಳ 14 ದಿನಗಳಾಗಿದ್ದಾಗ ಸರ್ಕಾರಿ ಸೇವೆಗೆ ಸೇರಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಗರಿಷ್ಠ ಮಿತಿಯ ನಾಲ್ಕು ವರ್ಷಗಳ ಹೆಚ್ಚುವರಿ ಸೇವಾ ಸೌಲಭ್ಯ ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 33 ಪಿಪಿಇ 2012, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2012.**

ಮೇಲಿನ ಪ್ರಸ್ತಾವನೆಯ ಹಿನ್ನಲೆಯಲ್ಲಿ, ಶ್ರೀ ಪಿ.ವೈ.ಜಾಲಗಾರ್, ನಿವೃತ್ತ ಅಭಿಯೋಗ ಉಪ ನಿರ್ದೇಶಕರು, ಸಿ.ಆರ್.ಇ.ಸೆಲ್, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಅನ್ವಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವಾವಧಿಯನ್ನು ಪ್ರಸ್ತುತ ಸೇವೆಯ ಪಿಂಚಣಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 144 ಸೇ–3/2012, ದಿನಾಂಕ: 18–02–2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

ಪಿ.ಆರ್. 810

## ಸಹಕಾರ ಸಚಿವಾಲಯ

**ವಿಷಯ :** ಸಿದ್ದಾರ್ಥ ಸ್ಪೋರ್ಟ್ಸ್ ಕ್ಲಬ್ (ರಿ), ಮೈಸೂರು ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವ ಬಗ್ಗೆ

**ಓದಲಾಗಿದೆ :**
1. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/198/ಎಸ್‌ಒಆರ್/2009–10, ದಿನಾಂಕ: 12–03–2010.
2. ಕಾರಣ ಕೇಳುವ ನೋಟಿಸ್ ಸಂಖ್ಯೆ: ಸಇ 41 ಸಸಂನೋ 2010, ದಿನಾಂಕ: 30–04–2010.
3. ಸಿದ್ದಾರ್ಥ ಸ್ಪೋರ್ಟ್ಸ್ ಕ್ಲಬ್ (ರಿ), ಮೈಸೂರು ರವರ ಪತ್ರ ದಿನಾಂಕ: 19–05–2010.
4. ಸಮ ಸಂಖ್ಯೆಯ ಸರ್ಕಾರದ ಪತ್ರ ದಿನಾಂಕ: 31–05–2010.

5. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/198/ ಎಸ್‌ಒಆರ್ 2010/11, ದಿನಾಂಕ: 01–12–2010.
6. ಸಮ ಸಂಖ್ಯೆಯ ಸರ್ಕಾರದ ಪತ್ರ ದಿನಾಂಕ: 20–01–2011.
7. ಸಹಕಾರ ಸಂಘಗಳ ಉಪನಿಬಂಧಕರು ಹಾಗೂ ಸಂಘ ಸಂಸ್ಥೆಗಳ ಜಿಲ್ಲಾ ನೋಂದಣಾಧಿಕಾರಿಗಳು, ಮೈಸೂರು ಇವರ ಪತ್ರ ಸಂಖ್ಯೆ: ಉನಿಮೈ:ಎ–2/ನೋಂ/2010–11, ದಿನಾಂಕ: 18–02–2011.
8. ಕಾರಣ ಕೇಳುವ ನೋಟಿಸ್ ಸಂಖ್ಯೆ: ಸಇ 41 ಸಸಂನೋ 2010, ದಿನಾಂಕ: 18–05–2011.
9. ಸಂಸ್ಥೆಯ ಪತ್ರ ದಿನಾಂಕ: 06–06–2011.
10. ಸಮ ಸಂಖ್ಯೆಯ ಸರ್ಕಾರದ ಪತ್ರ ದಿನಾಂಕ: 01–07–2011.
11. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/198/ ಎಸ್‌ಒಆರ್–3/2009–10, ದಿನಾಂಕ: 29–11–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸಿದ್ಧಾರ್ಥ ಸ್ಪೋರ್ಟ್ಸ್ ಕ್ಲಬ್ (ರಿ) ಮೈಸೂರು ಈ ಸಂಸ್ಥೆಯ ಆಡಳಿತ ಮಂಡಳಿಯ ಸದಸ್ಯರುಗಳ ಪೈಕಿ 6 ಜನ ನಿರ್ದೇಶಕರು ರಾಜೀನಾಮೆ ನೀಡಿರುವುದರಿಂದ ಸಂಘದ ಬೈಲಾ ಸಂಖ್ಯೆ 6(ಎ)(vii) ರಲ್ಲಿ ಆಡಳಿತ ಮಂಡಳಯ ಸಭೆಯ ಕೋರಂ 6 ಆಗಿದ್ದು, ಈ ಪೈಕಿ 3 ಜನ ಆಡಳಿತ ಮಂಡಳಿ ಸದಸ್ಯರು ಹಾಗೂ 3 ಜನ ಆಫೀಸ್ ಬೇರರ್‌ಗಳು ಸಭೆ ನಡೆಸಬೇಕಾಗಿರುತ್ತದೆಂದು ಸಂಘದ ಕಾರ್ಯದರ್ಶಿ, ಉಪಾಧ್ಯಕ್ಷರು, ಖಂಜಾಂಚಿ ಹಾಗೂ 3 ಜನ ಆಡಳಿತ ಮಂಡಳಿಯ ಸದಸ್ಯರು ರಾಜೀನಾಮೆ ನೀಡಿರುವುದರಿಂದ ಆಡಳಿತ ಮಂಡಳಿಯಲ್ಲಿ ಕೋರಂ ಅಭಾವ ಉಂಟಾಗಿ ಸಂಘದ ದೈನಂದಿನ ವ್ಯವಹಾರ ನಡೆಸಲು ತೊಂದರೆಯಾಗಿರುವುದರಿಂದ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)ರ ಅನ್ವಯ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಸಹಕಾರ ಸಂಘಗಳ ಉಪ ನಿಬಂಧಕರು ಹಾಗೂ ಸಂಘ ಸಂಸ್ಥೆಗಳ ಜಿಲ್ಲಾ ನೋಂದಣಾಧಿಕಾರಿಗಳು ಮೈಸೂರು ಜಿಲ್ಲೆ, ಮೈಸೂರು ರವರು ತಮ್ಮ ದಿನಾಂಕ: 25–02/2010 ಹಾಗೂ 02–03–2012ರ ಪತ್ರದಲ್ಲಿ ಮಾಡಿರುವ ಶಿಫಾರಸ್ಸು ಪರಿಗಣಿಸಿ, ಮೇಲ್ಕಂಡ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುಂತೆ ಕೋರಿ ಸಹಕಾರ ಸಂಘಗಳ ನಿಬಂಧಕರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 30–04–2010ರ ಕಾರಣ ಕೇಳುವ ನೋಟಿಸಿನಲ್ಲಿ ಸಹಕಾರ ಸಂಘಗಳ ಉಪನಿಬಂಧಕರು ಹಾಗೂ ಸಂಘ ಸಂಸ್ಥೆಗಳ ಜಿಲ್ಲಾ ನೋಂದಣಾಧಿಕಾರಿಗಳು ಮೈಸೂರು ಜಿಲ್ಲೆ, ಮೈಸೂರು ರವರ ದಿನಾಂಕ: 25–02–2010 ಹಾಗೂ 02–03–2010ರ ವರದಿಯಲ್ಲಿನ ಅಂಶಗಳ ಹಿನ್ನಲೆಯಲ್ಲಿ ಸಹಕಾರ ಸಂಘಗಳ ನಿಬಂಧಕರು ಮಾಡಿರುವ ಶಿಫಾರಸಿನಂತೆ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ನ್ನು ಉಲ್ಲಂಘನೆ ಮಾಡಿರುವುದು ಮೇಲ್ನೋಟಕ್ಕೆ ಕಂಡುಬಂದ ಕಾರಣ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ಪ್ರಕಾರ ತಮ್ಮ ಸಂಘಕ್ಕೆ ಆಡಳಿತಾಧಿಕಾರಿಯನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ ಹೇಳಿಕೆಯನ್ನು ಈ ಕಾರಣ ಕೇಳುವ ನೋಟಿಸ್ ತಲುಪಿದ 15 ದಿವಸಗಳ ಒಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ, ತಪ್ಪಿದಲ್ಲಿ, ನೀವು ಹೇಳುವುದು ಏನು ಇಲ್ಲವೆಂದು ಭಾವಿಸಿ ಮುಂದಿನ ಕ್ರಮ ಜರುಗಿಸಲಾಗುವುದೆಂದು ಮೇಲ್ಕಂಡ ಸಂಘದ ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳಿಗೆ ಸೂಚನೆ ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ: 19–05–2010ರ ಪತ್ರದಲ್ಲಿ ಸದರಿ ಸಂಘದ ಅಧ್ಯಕ್ಷರು ತಮ್ಮ ಹೇಳಿಕೆಯನ್ನು ನೀಡಿ ಸಂಘದ ಕಟ್ಟಡ ಕಾಮಗಾರಿ ಪ್ರಗತಿಯಲ್ಲಿದೆ, ಸರ್ವ ಸದಸ್ಯರ ಸಭೆಯನ್ನು ಶೀಘ್ರವಾಗಿ ಕರೆಯಲು ತಾವು ಸಿದ್ದರಿದ್ದು, ಅಲ್ಲಿಯವರೆಗೆ ಕಾಲಾವಕಾಶವನ್ನು ನೀಡುವಂತೆ ವಿನಂತಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ: 31–05–2010ರ ಸರ್ಕಾರದ ಪತ್ರದಲ್ಲಿ ಸದರಿ ಸಂಘದ ಅಧ್ಯಕ್ಷರು ನೀಡಿರುವ ಹೇಳಿಕೆಯ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸುವಂತೆ ಸಹಕಾರ ಸಂಘಗಳ ನಿಬಂಧಕರನ್ನು ಕೋರಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ದಿನಾಂಕ: 01–12–2010ರ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಸದರಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ಜರೂರಾಗಿ ನೇಮಕ ಮಾಡುವಂತೆ ಕೋರಿರುತ್ತಾರೆ.

ಮೇಲೆ (6)ರಲ್ಲಿ ಓದಲಾದ ದಿನಾಂಕ: 20–1–2011ರ, ಪತ್ರದಲ್ಲಿ ಸಿದ್ದಾರ್ಥ ಸ್ಪೋರ್ಟ್ಸ್ ಕ್ಲಬ್ (ರಿ), ಮೈಸೂರು ಈ ಸಂಸ್ಥೆಗೆ ಸಂಬಂಧಿಸಿದಂತೆ ಈ ಕೆಳಕಂಡ ಅಂಶಗಳ ಬಗ್ಗೆ ಹೆಚ್ಚುವರಿ ಮಾಹಿತಿಯನ್ನು ಒದಗಿಸುವಂತೆ ಸಹಕಾರ ಸಂಘಗಳ ಉಪನಿಬಂಧಕರು ಮೈಸೂರು ಜಿಲ್ಲೆ, ಮೈಸೂರು ರವರನ್ನು ಕೋರಲಾಗಿತ್ತು.

1. ಈ ಕ್ಲಬ್ ವಿರುದ್ಧ ಇರುವ ಆರೋಪಗಳೇನು?
2. ಸಂಸ್ಥೆಯಲ್ಲಿ ಏನಾದರೂ ನಿಯಮಬಾಹಿರ ಬದಲಾವಣೆ ಆಗಿರುತ್ತದೆ?
3. ಕ್ಲಬ್‌ನ ಪತ್ರದಲ್ಲಿ ತಿಳಿಸಿರುವಂತೆ ಆಡಳಿತ ಮಂಡಳಿಯ ಸಭೆ ನಡೆಸಲಾಗಿದೆಯೇ?
4. ಸಂಸ್ಥೆಯಲ್ಲಿ ಯಾವುದಾದರೂ ಬೈಲಾ ನಿಯಮ ಹಾಗೂ ಕಾಯ್ದೆಯ ಉಲ್ಲಂಘನೆಯಾಗಿದೆಯೇ?

ಈ ಬಗ್ಗೆ ಮೇಲೆ (7)ರಲ್ಲಿ ಓದಲಾದ ದಿನಾಂಕ: 18–02–2011ರ ಪತ್ರದಲ್ಲಿ ಮೇಲ್ಕಂಡ ಅಂಶಗಳ ಬಗ್ಗೆ ವರದಿ ಸಲ್ಲಿಸಿ, ಸದರಿ ಸಂಘದ ಆಡಳಿತ ಮಂಡಳಿಯವರು ಮಾಡಿರುವ ಕ್ಲಬ್ಬಿನ ಬೈಲಾ ಹಾಗೂ ಕಾಯ್ದೆ ಉಲ್ಲಂಘಿಸಿರುವುದರಿಂದ ಆಡಳಿತ ಮಂಡಳಿಯನ್ನು ವಜಾಗೊಳಿಸಿ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಸಹಕಾರ ಸಂಘಗಳ ಉಪನಿಬಂಧಕರು ಮೈಸೂರು ಜಿಲ್ಲೆ, ಮೈಸೂರು ರವರು ಕೋರಿರುತ್ತಾರೆ.

ಮೇಲೆ (8)ರಲ್ಲಿ ಓದಲಾದ ದಿನಾಂಕ: 18–05–2011ರ 2ನೇ ಕಾರಣ ಕೇಳುವ ನೋಟಿಸಿನೊಂದಿಗೆ ಸಹಕಾರ ಸಂಘಗಳ ಉಪನಿಬಂಧಕರು ಮೈಸೂರು ಜಿಲ್ಲೆ, ಮೈಸೂರು ರವರು ಮೇಲ್ಕಂಡ ಅಂಶಗಳ ಬಗ್ಗೆ ನೀಡಲಾಗಿದ್ದ ವರದಿಯಂತೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ನ್ನು ಉಲ್ಲಂಘನೆಮಾಡಿರುವುದು ಕಂಡು ಬಂದ ಕಾರಣ ಆಡಳಿತಾಧಿಕಾರಿಗಳನ್ನು ಏಕೆ ನೇಮಕ ಮಾಡಬಾರದು ಎಂಬ ಬಗ್ಗೆ ಲಿಖಿತ ಹೇಳಿಕೆಯನ್ನು ಈ ನೋಟಿಸ್ ತಲುಪಿದ 15 ದಿವಸಗಳ ಒಳಗಾಗಿ ಸರ್ಕಾರಕ್ಕೆ ಸಲ್ಲಿಸುವಂತೆ, ತಪ್ಪಿದಲ್ಲಿ, ನೀವು ಹೇಳುವುದು ಏನು ಇಲ್ಲವೆಂದು ಭಾವಿಸಿ ಮುಂದಿನ ಕ್ರಮ ಜರುಗಿಸಲಾಗುವುದೆಂದು ಮೇಲ್ಕಂಡ ಸಂಘದ ಅಧ್ಯಕ್ಷರು ಹಾಗೂ ಕಾರ್ಯದರ್ಶಿಗಳಿಗೆ ಸೂಚನೆ ನೀಡಲಾಗಿತ್ತು.

ಮೇಲೆ ಓದಲಾದ (9)ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ಸಲ್ಲಿಸಿರುವ ರಕ್ಷಣಾ ಹೇಳಿಕೆಯಲ್ಲಿ ಸಂಸ್ಥೆಯ ಮಹಾ ಸಭೆಯನ್ನು ಕಟ್ಟಡ ಕಾಮಗಾರಿಯನ್ನು ಪೂರ್ಣಗೊಳಿಸಿ ಹೊಸ ಕಟ್ಟಡದಲ್ಲಿ ನಡೆಸಬೇಕೆಂಬ ಉದ್ದೇಶದಿಂದ ನಡೆಸಲಾಗಿರುವುದಿಲ್ಲವೇ ವಿನಃ ಇದರಲ್ಲಿ ಬೇರೆ ಯಾವುದೇ ಉದ್ದೇಶವಿರುವುದಿಲ್ಲವೆಂದು ತಿಳಿಸುತ್ತಾ ಕಲಂ 27(ಎ) ಪ್ರಕಾರ ಯಾವುದೇ ಕ್ರಮ ಕೈಗೊಳ್ಳಬಾರದಾಗಿ ವಿನಂತಿಸಿರುತ್ತಾರೆ.

ಸಂಸ್ಥೆಯವರು ನೀಡಿದ ಹೇಳಿಕೆಯ ಬಗ್ಗೆ ಮೇಲೆ (10)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರಿಂದ ವರದಿ ಕೋರಲಾಗಿ, ಮೇಲೆ (11)ರಲ್ಲಿ ಓದಲಾದ ದಿನಾಂಕ: 29-11-2011ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ವರದಿ ಸಲ್ಲಿಸಿ, ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಇವರು ತಮ್ಮ ದಿನಾಂಕ: 02-11-2011ರ ಪತ್ರದಲ್ಲಿ ಈ ಕೆಳಕಂಡಂತೆ ವರದಿ ಮಾಡಿರುವುದಾಗಿ ತಿಳಿಸಿರುತ್ತಾರೆ.

1. 2008-09 ರಿಂದ 210-11ನೇ ಸಾಲಿನವರೆಗೂ ಸದರಿ ಸಂಘದಲ್ಲಿ ಬೈಲಾ ಹಾಗೂ ಕಾಯ್ದೆಯಂತೆ ವಾರ್ಷಿಕ ಮಹಾಸಭೆ ನಡೆಸದೆ ಇದ್ದು, ಸದರಿ ಸಂಘದಲ್ಲಿ ಕಟ್ಟದ ಕಾಮಗಾರಿಯು ತೀವ್ರವಾಗಿ ನಡೆಯುತ್ತಿದ್ದು, ಈ ಕಾರಣದಿಂದ ಮಹಾಸಭೆ ನಡೆಸಲು ಸಾಧ್ಯವಾಗಲಿಲ್ಲವೆಂದು ತಿಳಿಸಿದ್ದು, ಇದು ಒಪ್ಪುವಂತಾಗಿರುವುದಿಲ್ಲ ಹಾಗೂ ಇದಕ್ಕೆ ಆಡಳಿತ ಮಂಡಳಿಯವರೇ ಕಾರಣರಾಗಿರುತ್ತಾರೆ.
2. ದಿನಾಂಕ: 31-03-2009ಕ್ಕೆ ಆಡಳಿತ ಮಂಡಳಿಯ ಅವಧಿಯು ಮುಗಿದಿದ್ದರೂ ಸಹ ಸದರಿ ಆಡಳಿತ ಮಂಡಳಿಯವರೇ ಮುಂದುವರೆಯುತ್ತಿರುವುದು ಕ್ಲಬ್ಬಿನ ಬೈಲಾ ಹಾಗೂ ಕಾಯ್ದೆಗೆ ವಿರುದ್ಧವಾಗಿರುತ್ತದೆ.
3. ದಿನಾಂಕ: 11-01-2009 ರಂದು ನಡೆದ 2007-08ನೇ ಸಾಲಿನ ವಾರ್ಷಿಕ ಮಹಾಸಭೆಯ ನಿರ್ಣಯ ಮತ್ತು ಸದಸ್ಯತ್ವ ಶುಲ್ಕವನ್ನು ಹೆಚ್ಚಿಸುವ ಬಗ್ಗೆ ಚರ್ಚಿಸಿ ಅಂತಿಮವಾಗಿ ವಿಶೇಷ ಮಹಾಸಭೆ ಕರೆದು ಅದರಲ್ಲಿ ತೀರ್ಮಾನ ಕೈಗೊಳ್ಳಲು ನಿರ್ಣಯಿಸಿದ್ದರೂ ಸಹ ಮಹಾ ಸಭೆಯ ನಡವಳಿಕೆಯ ವಿರುದ್ಧವಾಗಿ ಹೊಸದಾಗಿ ಸದಸ್ಯರನ್ನು ನೋಂದಾಯಿಸಿಕೊಂಡಿರುವುದು ಕಾನೂನು ಬಾಹಿರವಾಗಿರುತ್ತದೆ.
4. ಸದರಿ ಕ್ಲಬ್ಬಿನ ಕಟ್ಟಡ ನಿರ್ಮಾಣಕ್ಕೆ ಸುಮಾರು 40.00 ಲಕ್ಷಗಳ ಕಾಮಗಾರಿ ಕೆಲಸ ಕೈಗೊಳ್ಳುವ ಮುನ್ನ ವಿಶೇಷ ಮಹಾಸಭೆಯಲ್ಲಿ ತೀರ್ಮಾನ ಕೈಗೊಳ್ಳದೇ ಹಾಗೂ ಮಹಾಸಭೆಯಲ್ಲಿ ಒಪ್ಪಿಗೆ ಇಲ್ಲದೆ ವ್ಯಯಮಾಡಿರುವುದು ಕ್ರಮಬದ್ಧವಾಗಿರುವುದಿಲ್ಲ.
5. ದಿನಾಂಕ 31-3-2009ಕ್ಕೆ ಆಡಳಿತ ಮಂಡಳಿಯ ಅವಧಿ ಮುಗಿದಿದ್ದಾಗ್ಯೂ ಸಹ ಚುನಾವಣೆ ನಡೆಸದೆ ನಿಯಮಬಾಹಿರವಾಗಿ ಆಡಳಿತ ಮಂಡಳಿಯವರು ಮುಂದುವರೆದಿರುವುದು ಹಾಗೂ ವಾರ್ಷಿಕ ಸರ್ವ ಸದಸ್ಯರ ಸಭೆಗಳನ್ನು ಕಾಲಕಾಲಕ್ಕೆ ನಡೆಸದೆ ಇರುವುದು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11, 12, 13 ಗಳನ್ನು ಸ್ಪಷ್ಟವಾಗಿ ಉಲ್ಲಂಘನೆ ಮಾಡಲಾಗಿದೆ.

ಮೇಲ್ಕಂಡ ಅಭಿಪ್ರಾಯದಂತೆ ಸಂಘದ ಮಹಾಸಭೆ ಹಾಗೂ ಚುನಾವಣೆ ನಡೆಸದೇ ಸಂಘವು ಸರ್ವಾಧಿಕಾರದಿಂದ ಮುಂದುವರಿಯುತ್ತಿರುವುದರಿಂದ ಸಂಸ್ಥೆಗೆ ಹಾಲಿ ಇರುವ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ ಸದರಿ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ಪ್ರಕಾರ ಆಡಳಿತಾಧಿಕಾರಿಯನ್ನು ನೇಮಿಸುವಂತೆ ಸಹಕಾರ ಸಂಘಗಳ ನಿಬಂಧಕರು ವಿನಂತಿಸಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಕಂಷವಾಗಿ ಪರಿಶೀಲಿಸಿ, ಸದರಿ ಸಂಸ್ಥೆಗೆ ಸರ್ಕಾರವು ಆಡಳಿತಾಧಿಕಾರಿಗಳನ್ನು ನೇಮಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 41 ಸಸಂನೋ 2010, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ, 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸಿದ್ಧಾರ್ಥ ಸ್ಪೋರ್ಟ್ಸ್ ಕ್ಲಬ್ (ರಿ), ಮೈಸೂರು ಈ ಸಂಸ್ಥೆಯ ಹಾಲಿ ಇರುವ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27 (ಎ) ರನ್ವಯ ಸದರಿ ಸಂಸ್ಥೆಗೆ 6 ತಿಂಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು (ಬಳಕೆ), ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಮೈಸೂರು, ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಹಾಗೂ ಈ ರೀತಿ ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎಸ್ ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ-2
ಸಹಕಾರ ಇಲಾಖೆ

ಪಿ.ಆರ್. 811

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ ಸಂಘದ ಗವರ್ನಿಂಗ್ ಕೌನ್ಸಿಲ್‌ಗೆ ಸದಸ್ಯರನ್ನಾಗಿ ಅಧಿಕಾರಿಗಳು/ಪಂಚಾಯತ್ ರಾಜ್ ಸಂಸ್ಥೆಗಳ ಅಧ್ಯಕ್ಷರುಗಳನ್ನು ನಾಮ ನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂ: ಅಸಪ,0.12011/9/2007-ಎನ್‌ಆರ್‌ಇಜಿಎ, ದಿನಾಂಕ: 19-03-2008, 09-07-2008, 25-11-2008, 24-12-2008.
2. ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ನಿಧಿ ನಿಯಮ 2008 ಬೆಂಗಳೂರು, ದಿನಾಂಕ: 31-07-2008.
3. ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ನಿಧಿ (ತಿದ್ದುಪಡಿ) ನಿಯಮ 2009 ಬೆಂಗಳೂರು, ದಿನಾಂಕ: 11-03-2009.
4. ರಾಜ್ಯ ಉದ್ಯೋಗ ಖಾತರಿ ಪರಿಷತ್ ಸಭೆ ದಿನಾಂಕ: 07-01-2009.
5. ಕರ್ನಾಟಕ ಸರ್ಕಾರದ ಆದೇಶ ಸಂ.ನಂ.ಗ್ರಾಅಪ:37:ಉಖಾಯೋ-2008 ದಿನಾಂಕ: 16-03-2009.
6. ಕರ್ನಾಟಕ ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 182 ಉಖಾಯೋ 2009 ಬೆಂಗಳೂರು, ದಿನಾಂಕ: 31-08-2009.

**ಪ್ರಸ್ತಾವನೆ :**

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಅಧಿನಿಯಮ 2005ರ ಕಲಂ 21(1)ರ ಅನ್ವಯ 'ರಾಜ್ಯ ನಿಧಿ' ಯನ್ನು ಸ್ಥಾಪಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ 1 ರಲ್ಲಿ ಸೂಚಿಸಲಾಗಿರುತ್ತದೆ. ಅದರಂತೆ ಕರ್ನಾಟಕ ರಾಜ್ಯ ಉದ್ಯೋಗ ಖಾತರಿ ನಿಧಿ ನಿಯಮವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ 2 ಮತ್ತು 3ರಂತೆ ರಚಿಸಲಾಗಿರುತ್ತದೆ. ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕೇಂದ್ರ ಸರ್ಕಾರದ ಅನುದಾನವನ್ನು ನೇರವಾಗಿ ರಾಜ್ಯಕ್ಕೆ ಪಡೆದು ಪಂಚಾಯಿತಿಗಳಿಗೆ ಬಿಡುಗಡೆ ಮಾಡಿ ಸಮರ್ಪಕವಾಗಿ ಉಸ್ತುವಾರಿ

ಮಾಡುವುದರಿಂದ ಯೋಜನೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬಹುದೆಂದು, ಮೇಲೆ ಓದಲಾದ ಕ್ರಮ ಸಂ.4ರ ಸಭೆಯಲ್ಲಿ ಕೈಗೊಂಡ ತೀರ್ಮಾನದಂತೆ ಈ ಉದ್ದೇಶದಿಂದ ಸಹಕಾರ ಸಂಘಗಳ ಅಧಿನಿಯಮದ ಪ್ರಕಾರ ಸಂಘವನ್ನು ರಚಿಸಿ ನೋಂದಣಿ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮಸಂಖ್ಯೆ:5ರಲ್ಲಿ ಏಜನ್ಸಿಯನ್ನು ಸಂಘವನ್ನಾಗಿ ಸಹಕಾರ ಸಂಘಗಳ ನೊಂದಣಿ ನಿಯಮದಡಿ, ಸರ್ಕಾರದ ಆದೇಶ ಸಂಖ್ಯೆ ನಂ. ಗ್ರಾಅಪ:37 ಉಖಾಯೋ 2008 ದಿನಾಂಕ: 16–03–2009ರಂತೆ ನೊಂದಣಿ ಮಾಡಿಸಲಾಗಿರುತ್ತದೆ. ಆದೇಶದಲ್ಲಿ ಸಂಘದ ಬೈಲಾ, ಸಂಘಗಳ ಒಡಂಬಡಿಕೆ (Memorandum of Association) ಗಳನ್ನು ಮಾಡಿಕೊಳ್ಳಲಾಗಿದ್ದು, ಅದರಂತೆ ಸಂಘಗಳ ಒಡಂಬಡಿಕೆ ಪ್ಯಾರಾ 7ರಂತೆ 13 ಜನ ಅಧಿಕಾರಿಗಳು (5 ಜನ ನಾಮ ನಿರ್ದೇಶಿತ) ಮತ್ತು 3 ಜನ ಅಧಿಕಾರೇತರ ಸದಸ್ಯರನ್ನೊಳಗೊಂಡ 16 ಜನರ ಸಂಘದ ಗವರನ್ನಿಂಗ್ ಕೌನ್ಸಿಲ್‌ನ್ನು ರಚಿಸಲಾಗಿರುತ್ತದೆ. ಈ ರೀತಿ ರಚಿಸಲಾದ ಗವರ್ನಿಂಗ್ ಕೌನ್ಸಿಲ್‌ಗೆ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರು ಅಧ್ಯಕ್ಷರಾಗಿದ್ದು, ನಿರ್ದೇಶಕರು, ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯವರು, ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಸಂಸ್ಥಾಪಕ ಸದಸ್ಯರ ಸಭೆಯಲ್ಲಿ ಕೈಗೊಂಡ ತೀರ್ಮಾನಗಳಲ್ಲಿ ಕ್ರಮ ಸಂಖ್ಯೆ 4ರಂತೆ ಗವರ್ನಿಂಗ್ ಕೌನ್ಸಿಲ್‌ಗೆ ಅಧಿಕಾರಿಗಳು/ಪಂಚಾಯತ್ ರಾಜ್ ಸಂಸ್ಥೆಗಳ ಅಧ್ಯಕ್ಷರುಗಳನ್ನು ನಾಮನಿರ್ದೇಶನ ಮಾಡುವ ಅಧಿಕಾರವನ್ನು ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ರವರಿಗೆ ನೀಡಲಾಗಿರುತ್ತದೆ. ಅದರಂತೆ ನಾಮ ನಿರ್ದೇಶನಗೊಳ್ಳಬೇಕಾದ ಅಧಿಕಾರಿಗಳು/ಪಂಚಾಯತ್ ರಾಜ್ ಸಂಸ್ಥೆಗಳ ಅಧ್ಯಕ್ಷರುಗಳನ್ನು ಪ್ರಧಾನ ಕಾರ್ಯದರ್ಶಿಗಳು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯವರು ಸೂಚಿಸಿರುತ್ತಾರೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 235 ಉಖಾಯೋ 2011 ಬೆಂಗಳೂರು, ದಿನಾಂಕ: 01–03–2012**

ಪ್ರಸ್ತಾವನೆಯಲ್ಲಿ ವಿವರಸಿದಂತೆ, ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಕರ್ನಾಟಕ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ ನಿಧಿ ಸಂಘದ ಉಸ್ತುವಾರಿ ಮತ್ತು ಮೇಲ್ವಿಚಾರಣೆಗಾಗಿ ಗವರ್ನಿಂಗ್ ಕೌನ್ಸಿಲ್‌ಗೆ ಅನುಬಂಧದಲ್ಲಿ ನಮೂದಿಸಿದಂತೆ ಪಂಚಾಯತ್ ರಾಜ್ ಸಂಸ್ಥೆಗಳ ಅಧಿಕಾರಿಗಳು/ಅಧ್ಯಕ್ಷರುಗಳನ್ನು ನಾಮ ನಿರ್ದೇಶನಗೊಳಿಸಿ ಆದೇಶಿಸಿದೆ.

**ನಾಮನಿರ್ದೇಶನ, ಪದಾವಧಿಯ ವಿಧಾನ ಮತ್ತು ಷರತ್ತುಗಳು:**

1 ಗವರ್ನಿಂಗ್ ಕೌನ್ಸಿಲ್‌ಗೆ ನಾಮನಿರ್ದೇಶಿತರಾದ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯತಿ ಅಧ್ಯಕ್ಷರು ಹಾಗೂ ಅಧಿಕಾರಿಗಳು ನಾಮ ನಿರ್ದೇಶನಗೊಂಡಂದಿನಿಂದ ಎರಡು ವರ್ಷದ ಪದಾವಧಿಯನ್ನು ಹೊಂದಿರುತ್ತಾರೆ.

2 ಪದನಾಮಾಂಕಿತ ನಾಮನಿರ್ದೇಶನ ಮಾಡಿರುವಲ್ಲಿ ಉತ್ತರವರ್ತಿಯು ಪದಾವಧಿಯ ಉಳಿದ ಅವಧಿಗೆ ಸದಸ್ಯರಾಗಿರುತ್ತಾರೆ.

3 ಗವರ್ನಿಂಗ್ ಕೌನ್ಸಿಲ್‌ನ ಸದಸ್ಯರು ವರ್ಷಕ್ಕೆ ಒಮ್ಮೆ ಸಭೆ ಸೇರಿ ಸಭೆಯನ್ನು ನಡೆಸತಕ್ಕದ್ದು.

4 ನಾಮನಿರ್ದೇಶಿತ ಸದಸ್ಯರುಗಳ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯಮಾನುಸಾರ ಆಯಾ ಪಂಚಾಯತ್ ರಾಜ್ ಸಂಸ್ಥೆಗಳಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಶಿವಶಂಕರ್**

ನಿರ್ದೇಶಕರು

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ

ಖಾತರಿ ಯೋಜನೆ

ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಅನುಬಂಧ

**ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ ಗವರ್ನಿಂಗ್ ಕೌನ್ಸಿಲ್‌ನ ಖಾಯಂ ಸದಸ್ಯರು ಮತ್ತು ನಾಮನಿರ್ದೇಶನಗೊಂಡ ಅಧಿಕಾರಿಗಳು/ಅಧಿಕಾರೇತರ ಸದಸ್ಯರು**

| ಕ್ರ.ಸಂ. | ಹುದ್ದೆ / ಪದನಾಮ | ಗವರ್ನಿಂಗ್ ಕೌನ್ಸಿಲ್‌ನಲ್ಲಿ ಹೊಂದಿರುವ ಸ್ಥಾನಮಾನ |
|---|---|---|
| 1 | ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ | ಅಧ್ಯಕ್ಷರು (ಖಾಯಂ ಸದಸ್ಯರು) |
| 2 | ಕಾರ್ಯದರ್ಶಿ (ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ ಕರ್ನಾಟಕ ಸರ್ಕಾರ. | ಸದಸ್ಯರು (ಖಾಯಂ ಸದಸ್ಯರು) |
| 3 | ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು (ಖಾಯಂ ಸದಸ್ಯರು) |
| 4 | ನಿರ್ದೇಶಕರು, ಮ.ಗಾ.ರಾ.ಗ್ರಾ.ಉ.ಖಾ.ಯೋ. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯ ಕಾರ್ಯದರ್ಶಿ (ಖಾಯಂ ಸದಸ್ಯರು) |
| 5 | ನಿರ್ದೇಶಕರು, ಪಂಚಾಯತ್ ರಾಜ್, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ. | ಸದಸ್ಯರು (ಖಾಯಂ ಸದಸ್ಯರು) |

| | | |
|---|---|---|
| 6 | ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ. | ಸದಸ್ಯರು (ಖಾಯಂ ಸದಸ್ಯರು) |
| 7 | ಮುಖ್ಯಸ್ಥರು (ಹ&ಲೆ) ರಾ.ಗ್ರಾ.ಉ.ಖಾ.ಯೋ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ. | ಸದಸ್ಯರು (ಖಾಯಂ ಸದಸ್ಯರು) |
| 8 | ನಿಯಂತ್ರಕರು (ಲೆಕ್ಕಪತ್ರ ನಿರ್ವಹಣೆ) ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ | ಸದಸ್ಯರು (ಖಾಯಂ ಸದಸ್ಯರು) |
| 9 | ಜಿಲ್ಲಾ ಪಂಚಾಯತ್ ಅಧ್ಯಕ್ಷರು, ಕೋಲಾರ ಜಿಲ್ಲಾ ಪಂಚಾಯತ್, ಕೋಲಾರ. | ಸದಸ್ಯರು (ನಾಮ ನಿರ್ದೇಶನ ಗೊಂಡವರು) |
| 10 | ತಾಲ್ಲೂಕು ಪಂಚಾಯತ್ ಅಧ್ಯಕ್ಷರು, ಪುತ್ತೂರು ತಾಲ್ಲೂಕು ಪಂಚಾಯತ್, ದಕ್ಷಿಣ ಕನ್ನಡ ಜಿಲ್ಲೆ. | ಸದಸ್ಯರು (ನಾಮ ನಿರ್ದೇಶನ ಗೊಂಡವರು) |
| 11 | ಗ್ರಾಮ ಪಂಚಾಯಿತಿ ಅಧ್ಯಕ್ಷರು, ಯಾದವಾಡ ಗ್ರಾಮ ಪಂಚಾಯಿತಿ, ಧಾರವಾಡ ತಾಲ್ಲೂಕು, ಧಾರವಾಡ ಜಿಲ್ಲೆ. | ಸದಸ್ಯರು (ನಾಮ ನಿರ್ದೇಶನ ಗೊಂಡವರು) |
| 12 | ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು. | ಸದಸ್ಯರು (ನಾಮ ನಿರ್ದೇಶನ ಗೊಂಡವರು) |
| 13 | ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಳಗಾವಿ. | ಸದಸ್ಯರು (ನಾಮ ನಿರ್ದೇಶನ ಗೊಂಡವರು) |
| 14 | ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ತುಮಕೂರು. | ಸದಸ್ಯರು (ನಾಮ ನಿರ್ದೇಶನ ಗೊಂಡವರು) |
| 15 | ಕಾರ್ಯನಿರ್ವಾಹಕಾಧಿಕಾರಿಗಳು, ತಾಲ್ಲೂಕು ಪಂಚಾಯಿತಿ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ. | ಸದಸ್ಯರು (ನಾಮ ನಿರ್ದೇಶನ ಗೊಂಡವರು) |
| 16 | ಕಾರ್ಯನಿರ್ವಾಹಕಾಧಿಕಾರಿಗಳು, ತಾಲ್ಲೂಕು ಪಂಚಾಯಿತಿ, ಹರಿಹರ, ದಾವಣಗೆರೆ ಜಿಲ್ಲೆ. | ಸದಸ್ಯರು (ನಾಮ ನಿರ್ದೇಶನ ಗೊಂಡವರು) |

**ಪಿ. ಶಿವಶಂಕರ್**
ನಿರ್ದೇಶಕರು
ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ
ಖಾತರಿ ಯೋಜನೆ
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 812

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಎಸ್‌ಜಿಎಸ್‌ವೈಯಡಿ 2011-12ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ರಾಜ್ಯದ 6 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/01/2011 ಎಸ್‌ಜಿಎಸ್‌ವೈ–I ದಿನಾಂಕ: 11-04-2011.
2. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜಿ 20011/1/2011 ಎಸ್‌ಜಿಎಸ್‌ವೈ–I (9) ದಿನಾಂಕ: 15-04-2011, (38) ದಿನಾಂಕ: 15-04-2011 ಮತ್ತು (67) ದಿನಾಂಕ: 15-04-2011.
3. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 25 ಎಸ್‌ಜೆವೈ 2010, ಬೆಂಗಳೂರು, ದಿನಾಂಕ: 03-05-2011.
4. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ: 21-06-2011, 22-11-2011 ಮತ್ತು 03-02-2012.
5. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/11/2010-ಎಸ್‌ಜಿಎಸ್‌ವೈ– I (105) ದಿನಾಂಕ: 15-09-2011.
6. ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ ಇವರ ಪತ್ರ ಸಂಖ್ಯೆ: ಆಇ 02 ಬಿಎಸ್‌ಜಿ 2011, ದಿನಾಂಕ: 04-01-2012.
7. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ 12022/3/2011– ಎಸ್‌ಜಿಎಸ್‌ವೈ– I (205) ದಿನಾಂಕ: 20-1-2011 (ಮೂರು ಪತ್ರಗಳು) ಮತ್ತು (213) ದಿನಾಂಕ: 27-01-2011 (ಮೂರು ಪತ್ರಗಳು).

**ಪ್ರಸ್ತಾವನೆ :**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯು (ಎಸ್‌ಜಿಎಸ್‌ವೈ) ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಯೋಜನೆಯ ಮಾರ್ಗಸೂಚಿಯಂತೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅನುದಾನವನ್ನು 75 : 25 ರ ಅನುಪಾತದಲ್ಲಿ ಭರಿಸಬೇಕಾಗಿದೆ. ಕೇಂದ್ರ ಸರ್ಕಾರದ

ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (2) ಮತ್ತು (5) ರ ಪತ್ರಗಳಲ್ಲಿ ಎಸ್‌ಜಿಎಸ್‌ವೈ ಯಡಿ 2011-12ನೇ ಸಾಲಿಗೆ 30 ಜಿಲ್ಲೆಗಳಿಗೆ ಒಂದನೇ ಕಂತಿನ ಅನುದಾನ ಒಟ್ಟು ರೂ.43,31,50,000 ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ಓದಲಾಗಿದೆ (4) ರ ಆದೇಶಗಳಲ್ಲಿ ರಾಜ್ಯ ಸರ್ಕಾರ ತನ್ನ ಪಾಲಿನ ಒಂದನೇ ಕಂತಿನ ಅನುದಾನ ರೂ.14,43,83,000 ಗಳನ್ನು ಬಿಡುಗಡೆ ಮಾಡಿದೆ.

ಎಸ್‌ಜಿಎಸ್‌ವೈ ಯಡಿ ಕೇಂದ್ರ ಸರ್ಕಾರ 2011-12ನೇ ಸಾಲಿನಲ್ಲಿ ಬಾಗಲಕೋಟೆ, ಬೆಂಗಳೂರು ಗ್ರಾಮಾಂತರ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಹಾವೇರಿ ಮತ್ತು ಉತ್ತರ ಕನ್ನಡ ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ರೂ.5,54,95,000 ಗಳನ್ನು ಓದಲಾಗಿದೆ (7) ಪತ್ರಗಳಲ್ಲಿ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ.1,84,97,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ.

ಕೇಂದ್ರ ಸರ್ಕಾರ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ಎರಡನೇ ಕಂತಿನ ಅನುದಾನ ರೂ.76,24,000 ಗಳನ್ನು ಬಿಡುಗಡೆ ಮಾಡಿದ್ದು, ಇದಕ್ಕನುಗಣವಾಗಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ರೂ.25,41,000 ಗಳನ್ನು ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾಗಿ ಬಿಡುಗಡೆ ಮಾಡಬೇಕಾಗಿದೆ. ಆದರೆ, ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದ ಲಭ್ಯತೆಗೆ ಸೀಮಿತಗೊಳಿಸಿ ರೂ.16,41,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ಆಯವ್ಯಯದಲ್ಲಿನ ಲಭ್ಯತೆಗೆ ಅನುಗುಣವಾಗಿ ಹಾಗೂ ಉಳಿದ ಐದು ಜಿಲ್ಲಾ ಪಂಚಾಯತಿಗಳಿಗೆ ಕೇಂದ್ರ ಪಾಲಿನ ಅನುದಾನಕ್ಕನುಗುಣವಾಗಿ ಒಟ್ಟಾರೆ ರೂ.1,76,20,000 ಗಳನ್ನು ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾಗಿ ಬಿಡುಗಡೆಗೊಳಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ: 03-03-2012**

ರಾಜ್ಯ ಸರ್ಕಾರವು, ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) 2011-12ನೇ ಸಾಲಿನ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನ ರೂ.1,76,20,000 ಗಳನ್ನು (ಒಂದು ಕೋಟಿ ಎಪ್ಪತ್ತಾರು ಲಕ್ಷದ ಇಪ್ಪತ್ತು ಸಾವಿರ ರೂ ಮಾತ್ರ) ಗಳನ್ನು ಅನುಬಂಧದಲ್ಲಿ ತೋರಿಸಿರುವಂತೆ 6 ಜಿಲ್ಲಾ ಪಂಚಾಯತಿಗಳಿಗೆ ಮಂಜೂರಾತಿ ನೀಡಿ ಬಿಡುಗಡೆ ಮಾಡಿದೆ

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198 ಗ್ರಾಮ ಪಂಚಾಯತ್‌ಗಳಿಗೆ ಸಹಾಯ-6 ಗ್ರಾಮ ಪಂಚಾಯತ್‌ಗಳು-01-ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2011-2012ನೇ ಲಿಂಕ್ ಕೋಡ್ 2501-01-198-6-01" (ಹೊಸ ಜಿಲ್ಲಾ ಪಂಚಾಯತಿ ಕೋಡ್ 2501-01-101-0-13) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ: 14-07-2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳಿಗೆ ಖಜಾನೆಯಿಂದ ಅನುದಾನವನ್ನು ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಖಜಾನೆಯಿಂದ ಅನುದಾನವನ್ನು ಪೇಯೀಸ್ ರಸೀದಿ ಮೇಲೆ ಸೆಳೆಯಲು ಆರ್ಥಿಕ ಇಲಾಖೆ (ವೆಚ್ಚ-6) ಯ ಸಂಖ್ಯೆ ಆಇ 172 ವೆಚ್ಚ-6/2011 ದಿನಾಂಕ: 30-03-2011 ರಂತೆ ಸಹಮತಿಸಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ: ಗ್ರಾಅಪ 14 ಎಸ್‌ಜೆವೈ 2007 ದಿನಾಂಕ: 18-04-2007ರ ಸೂಚನೆಯಂತೆ ಕ್ರಮಕೈಗೊಳ್ಳುವುದು.

ಬಿಡುಗಡೆ ಮಾಡುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2011-12ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ onlineಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಗ್ರಾಮೂಸೌ-2) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ: ಗ್ರಾಅಪ 4 ಪಿಬಿಎಸ್ 2011-12 ದಿನಾಂಕ: 29-02-2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ-2)ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಸರ್ಕಾರದ ಅದೇಶ ಸಂಖ್ಯೆ: ಗ್ರಾಅಪ 13 ಎಸ್‌ಜೆವೈ 2011, ಬೆಂಗಳೂರು, ದಿನಾಂಕ: 03-3-2012**

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2011-12ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ಇದಕ್ಕನುಗುಣ ವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾಗಿ ರುವ ಎರಡನೇ ಕಂತಿನ ಅನುದಾನ | 2011-12ನೇ ಸಾಲಿಗೆ ರಾಜ್ಯದ ಆಯವ್ಯಯದ ಲ್ಲಿ ನಿಗದಿ ಪಡಿಸಿದ ಅನುದಾನ (ಹೆಚ್ಚುವರಿ ಸೇರಿ) | 2011-12ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಈವರೆವಿಗೂ ಬಿಡುಗಡೆ ಮಾಡಿರುವ ಅನುದಾನ | ಜಿಲ್ಲಾ ಪಂಚಾಯತಿಗ ಳಲ್ಲಿ ಲಭ್ಯತೆ ಇರುವ ಅನುದಾನು | ಜಿ.ಪಂ. ಗಳಿಗೆ ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಬಾಗಲಕೋಟೆ | 461 | 2900ZZ0001 | 1,02,22,000 | 34,07,000 | 1,37,91,000 | 98,21,000 | 31,70,000 | 34,07,000 |
| 2 | ಬೆಂಗಳೂರು (ಗ್ರಾ) | 402 | 0300ZZ8001 | 56,40,000 | 18,80,000 | 37,61,000 | 18,80,000 | 18,81,000 | 18,80,000 |
| 3 | ಚಿಕ್ಕಮಗಳೂರು | 408 | 1800ZZ0017 | 63,60,000 | 21,20,000 | 73,99,000 | 41,89,000 | 32,10,000 | 21,20,000 |
| 4 | ದಕ್ಷಿಣ ಕನ್ನಡ | 409 | 1900ZZ0047 | 76,24,000 | 25,41,000 | 2,57,00,000 | 2,40,36,000 | 16,64,000 | 16,64,000 |
| 5 | ಹಾವೇರಿ | 463 | 2700ZZ0001 | 1,49,26,000 | 49,75,000 | 1,05,13,000 | 55,38,000 | 49,75,000 | 49,75,000 |
| 6 | ಉತ್ತರ ಕನ್ನಡ | 416 | 3000ZZ0080 | 1,07,23,000 | 35,74,000 | 71,49,000 | 35,73,000 | 35,76,000 | 35,74,000 |
| | | | | 5,54,95,000 | 1,84,97,000 | 6,83,13,000 | 4,90,37,000 | 1,84,76,000 | 1,76,20,000 |

**ಎಂ. ದೀಪ**
ನಿರ್ದೇಶಕರು (ಗ್ರಾಮೂಸೌ-2) ಹಾಗೂ
ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 813

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2011-12ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು 5 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-18014 /01/ : 2011-12 ಡಿಆರ್‌ಡಿಎ (ಎಸ್‌ಎಲ್‌ನಂ.10), ದಿನಾಂಕ: 15-04-2011.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 6 ಎಸ್‌ಜೆವೈ (ಡಿಆರ್‌ಡಿಎ) 2010, ಬೆಂಗಳೂರು, ದಿನಾಂಕ: 03-05-2011.
3. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ: 20-08-2011 ಮತ್ತು 22-11-2011.
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-17014 /10/ : 2011-12 ಡಿಆರ್‌ಡಿಎ (ಎಸ್‌ಎಲ್ ನಂ. 34), ದಿನಾಂಕ: 12-07-2011.
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-17014 /10/ : 2011-12 ಡಿಆರ್‌ಡಿಎ (ಎಸ್‌ಎಲ್ ನಂ. 127), ದಿನಾಂಕ: 19-01-2012.

**ಪ್ರಸ್ತಾವನೆ :**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತದೆ. 2011-12ನೇ ಸಾಲಿಗೆ ಕೇಂದ್ರ ಸರ್ಕಾರ ರಾಜ್ಯದ ಯಾದಗಿರಿ ಜಿಲ್ಲಾ ಪಂಚಾಯತ್ ಹೊರತುಪಡಿಸಿ ಉಳಿದ 29 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿರುವ (1) ಮತ್ತು (4) ರ ಪತ್ರಗಳಲ್ಲಿ ರೂ.10,05,89,000 ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ.3,35,20,000 ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ 2010-11ನೇ ಸಾಲಿನ ವರ್ಷಾಂತ್ಯದಲ್ಲಿ ಕೇಂದ್ರ ಸರ್ಕಾರವು ಚಿಕ್ಕಮಗಳೂರು ಮತ್ತು ಯಾದಗಿರಿ ಜಿಲ್ಲಾ ಪಂಚಾಯತಿಗಳನ್ನು ಹೊರತುಪಡಿಸಿ ಉಳಿದ 28 ಜಿಲ್ಲಾ ಪಂಚಾಯತಿಗಳಿಗೆ ಯೋಜನೆಯಡಿ ಹೆಚ್ಚುವರಿಯಾಗಿ ರೂ.5,77,69,000ಗಳನ್ನು ಬಿಡುಗಡೆ ಮಾಡಿತ್ತು. ಇದಕ್ಕನುಗುಣವಾಗಿ ಓದಲಾಗಿದೆ (2) ರನ್ವಯ ರಾಜ್ಯ ಸರ್ಕಾರವು, ರಾಜ್ಯದ ಪಾಲಿನ ಅನುದಾನ ರೂ.1,98,25,000 ನ್ನು 2011-12ನೇ ಸಾಲಿನ ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದಿಂದ ಭರಿಸಿ ಬಿಡುಗಡೆ ಮಾಡಿದ ಕಾರಣ, ಓದಲಾಗಿದೆ (3)ರ ಆದೇಶಗಳಲ್ಲಿ ರಾಜ್ಯದ ಪಾಲಿನ ಒಂದನೇ ಕಂತಿನ ಅನುದಾನವನ್ನು ರೂ.3,24,50,000 ಮಾತ್ರ ಬಿಡುಗಡೆ ಮಾಡಲಾಗಿದೆ.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಓದಲಾಗಿದೆ (5)ರ ಪತ್ರದಲ್ಲಿ ಬಿಜಾಪುರ, ಧಾರವಾಡ, ಗದಗ್, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನ ರೂ.1,19,24,000ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ರೂ.39,73,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಎಸ್‌ಜಿವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ: 03-03-2012**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2011-12 ನೇ ಸಾಲಿನಲ್ಲಿ ಬಿಜಾಪುರ, ಧಾರವಾಡ, ಗದಗ್, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ರೂ.39,73,000 ಗಳನ್ನು (ರೂ. ಮೂವತ್ತೊಂಬತ್ತು ಲಕ್ಷದ ಎಪ್ಪತ್ತಮೂರು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ.ಸಂ. | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | 2011-12ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಅಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ಇದಕ್ಕನುಗಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | 2 | 3 | 4 | 5 | 6 |
| 1 | ಬಿಜಾಪುರ | 414 | 2800ZZ9152 | 27,85,000 | 9,28,000 |
| 2 | ಧಾರವಾಡ | 415 | 2500ZZ8798 | 27,85,000 | 9,28,000 |
| 3 | ಗದಗ್ | 462 | 2600ZZ0001 | 27,85,000 | 9,28,000 |
| 4 | ಶಿವಮೊಗ್ಗ | 405 | 1400ZZ0002 | 31,84,000 | 10,61,000 |
| 5 | ತುಮಕೂರು | 406 | 0800ZZ0001 | 3,85,000 | 1,28,000 |
| | | | ಒಟ್ಟು | 1,19,24,000 | 39,73,000 |

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ: "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00-196-ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ-6-ಜಿಲ್ಲಾ ಪಂಚಾಯತ್-06-ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ- (ಕೇಂದ್ರ ಪುರಸ್ಕೃತ ಯೋಜನೆ) 2011-2012 ಲಿಂಕ್ ಕೋಡ್ 2515-00-196-6-06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515-00-101-0-01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ: 26-04-2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ-1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ-6)ಯ ಸಂಖ್ಯೆ ಆಇ 172 ವೆಚ್ಚ-6/2011 ದಿನಾಂಕ: 30-03-2011ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಬಿಜಾಪುರ, ಧಾರವಾಡ, ಗದಗ್, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮಿಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬಿಜಾಪುರ, ಧಾರವಾಡ, ಗದಗ್, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಗ್ರಾಮೂಸೌ-2) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಬಿಜಾಪುರ, ಧಾರವಾಡ, ಗದಗ್, ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು (ಗ್ರಾಮೂಸೌ-2) ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ: ಗ್ರಾಅಪ 8 ಪಿಬಿಎಸ್ 2011-12 ದಿನಾಂಕ: 27-02-2012 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ದೀಪ**

ನಿರ್ದೇಶಕರು (ಗ್ರಾಮೂಸೌ-2) ಹಾಗೂ

ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 814

## ಇಂಧನ ಸಚಿವಾಲಯ

**ವಿಷಯ :** ನವೀಕರಿಸಬಹುದಾದ ಇಂಧನ ಕ್ರಿಯಾ ಯೋಜನಾ ತಂಡವನ್ನು (Renewable Energy Vision Group) ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 354 ಎನ್‌ಸಿಇ 2008, ದಿನಾಂಕ: 19–01–2010.
2. ತಿದ್ದುಪಡಿ ಸಂಖ್ಯೆ: ಇಎನ್ 76 ಇಎಂಸಿ–2 2010, ದಿನಾಂಕ: 06–05–2010.
3. ತಿದ್ದಪಡಿ ಸಂಖ್ಯೆ: ಇಎನ್ 07 ಎನ್‌ಸಿಇ 2011, ದಿನಾಂಕ: 18–07–2011.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/01/MD/2011/4716, ದಿನಾಂಕ: 23–12–2011.

**ಪ್ರಸ್ತಾವನೆ :**

ಅಸಂಪ್ರದಾಯಕ ಇಂಧನ ಮೂಲಗಳಿಂದ ವಿದ್ಯುತ್ ಉತ್ಪಾದನೆಯನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸರ್ಕಾರವು ಸಾಕಷ್ಟು ಉದ್ದಿಮೆದಾರರಿಗೆ ಖಾಸಗಿ ವಲಯದಲ್ಲಿ ವಿದ್ಯುತ್ ಯೋಜನೆಗಳನ್ನು ಹಂಚಿಕೆ ಮಾಡುತ್ತಿದೆ.

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 19–01–2010ರಲ್ಲಿ ಸರ್ಕಾರವು ನವೀಕರಿಸಬಹುದಾದ ಇಂಧನ ನೀತಿ 2009–14ನ್ನು ಘೋಷಿಸಿದೆ ಹಾಗೂ ಮೇಲೆ ಕ್ರಮಾಂಕ (2) ಮತ್ತು (3)ರಲ್ಲಿ ಓದಲಾದ ತಿದ್ದೋಲೆಯಲ್ಲಿ ಸದರಿ ನೀತಿಯ ಕೆಲವು ಶೀರ್ಷಿಕೆಗಳ ಅಡಿಯಲ್ಲಿ ತಿದ್ದುಪಡಿಗಳನ್ನು ಹೊರಡಿಸಿದೆ. ಈ ನೀತಿಯ ಪ್ರಕಾರ ನವೀಕರಿಸಬಹುದಾದ ಇಂಧನ ಮೂಲಗಳಿಂದ ಮುಂದಿನ 5 ವರ್ಷಗಳಲ್ಲಿ ಸುಮಾರು 4200 ಮೆ.ವ್ಯಾ. ವಿದ್ಯುತ್ ಸಾಮರ್ಥ್ಯವನ್ನು ರಾಜ್ಯ ವಿದ್ಯುತ್ ಜಾಲಕ್ಕೆ ಸೇರಿಸುವ ಗುರಿಯನ್ನು ಹೊಂದಲಾಗಿದೆ.

ನವೀಕರಿಸಬಹುದಾದ ಇಂಧನ ನೀತಿ 2009–14ರ ಕಂಡಿಕೆ 17 ರನ್ವಯ ನವೀಕರಿಸಹುದಾದ ಇಂಧನ ಕ್ರಿಯಾ ಯೋಜನಾ ತಂಡವನ್ನು (Renewable Energy Vision Group) ಸರ್ಕಾರ ರಚಿಸಬೇಕಾಗಿರುತ್ತದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಇವರು ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ಪತ್ರದಲ್ಲಿ ಈ ಕೆಳಕಂಡ ಕ್ರಿಯಾ ಯೋಜನಾ ತಂಡವನ್ನು ರಚಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | | |
|---|---|---|
| 1 | ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ | ಅಧ್ಯಕ್ಷರು |
| 2 | ಶ್ರೀ ದೀಪಕ್ ಗುಪ್ತಾ, (ಭಾ.ಆ.ಸೇ.ನಿವೃತ್ತ) ಹಿಂದಿನ ಕಾರ್ಯದರ್ಶಿ ನವ ಮತ್ತು ನವೀಕರಿಸಹುದಾದ ಇಂಧನ ಮಂತ್ರಾಲಯ, ಭಾರತ ಸರ್ಕಾರ. | ಸದಸ್ಯರು |
| 3 | ಡಾ: ಕೋಟ ಹರಿನಾರಾಯಣ, ಡಿಆರ್‌ಡಿಓ, ವಿಜ್ಞಾನಿ, | ಸದಸ್ಯರು |
| 4 | ಶ್ರೀ ಹರೀಶ್ ಹಂದೆ, ಸಿಎಂಡಿ, ಸೆಲ್ಕೊ | ಸದಸ್ಯರು |
| 5 | ಡಾ: ಅಂಶು ಭಾರದ್ವಾಜ್, ಸಿ–ಸ್ಟೆಪ್ | ಸದಸ್ಯರು |
| 6 | ಪ್ರೊ: ಬಿ.ಎನ್. ರಘುನಂದನ್, ಅಧ್ಯಕ್ಷರು, ಸಿಇಸಿ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ | ಸದಸ್ಯರು |
| 7 | ಡಾ: ಪ್ರಭು, ಬೆರಿ ಪ್ರಾಜೆಕ್ಟ್ | ಸದಸ್ಯರು |
| 8 | ಡಾ: ದಯಾನಂದ, ಹಿರಿಯ ವಿಜ್ಞಾನಿ, ಎನ್‌ಎಎಲ್ | ಸದಸ್ಯರು |
| 9 | ಶ್ರೀ ಮಿನಿ ಶಾಸ್ತ್ರಿ, ಎನಜಿ ಕನ್ಸರ್ವೇಶನ್, ಟೆರಿ | ಸದಸ್ಯರು |
| 10 | ವ್ಯವಸ್ಥಾಪಕ ನಿರ್ದೇಶಕರು, ಕೆಪಿಟಿಸಿಎಲ್, | ಸದಸ್ಯರು |
| 11 | ವ್ಯವಸ್ಥಾಪಕ ನಿರ್ದೇಶಕರು, ಕೆಪಿಸಿಎಲ್, | ಸದಸ್ಯರು |
| 12 | ವ್ಯವಸ್ಥಾಪಕ ನಿರ್ದೇಶಕರು, ಪಿಸಿಕೆಎಲ್, | ಸದಸ್ಯರು |
| 13 | ವ್ಯವಸ್ಥಾಪಕ ನಿರ್ದೇಶಕರು, ಬೆಸ್ಕಾಂ | ಸದಸ್ಯರು |
| 14 | ಸರ್ಕಾರದ ಮುಖ್ಯ ವಿದ್ಯುತ್ ಪರಿವೀಕ್ಷಕರು, (CEIG) ವಿದ್ಯುತ್ ಪರಿವೀಕ್ಷಣಾಲಯ, | ಸದಸ್ಯರು |
| 15 | ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ | ಸಂಚಾಲಕರು |

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 484 ಎನ್‌ಸಿಇ 2011, ಬೆಂಗಳೂರು, ದಿನಾಂಕ: 05–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ನವೀಕರಿಸಬಹುದಾದ ಇಂಧನ ವಲಯವನ್ನು ಪ್ರೋತ್ಸಾಹಿಸುವ ಹಾಗೂ ಹೊಸ ರೂಪವನ್ನು ನೀಡುವ ಉದ್ದೇಶದಿಂದ ಈ ಕೆಳಕಂಡ ನವೀಕರಿಸಬಹುದಾದ ಇಂಧನ ಕ್ರಿಯಾ ಯೋಜನಾ ತಂಡವನ್ನು (Renewable Energy Vision Group) ರಚಿಸಿ ಆದೇಶಿಸಿದೆ.

| | | |
|---|---|---|
| 1 | ಶ್ರೀ ದೀಪಕ್ ಗುಪ್ತಾ, (ಭಾ.ಆ.ಸೇ.ನಿವೃತ್ತ) ಹಿಂದಿನ ಕಾರ್ಯದರ್ಶಿ ನವ ಮತ್ತು ನವೀಕರಿಸಹುದಾದ ಇಂಧನ ಮಂತ್ರಾಲಯ, ಭಾರತ ಸರ್ಕಾರ. | ಅಧ್ಯಕ್ಷರು |
| 2 | ಡಾ: ಕೋಟಿ ಹರಿನಾರಾಯಣ, ಡಿಆರ್‌ಡಿಓ, ವಿಜ್ಞಾನಿ, ಬೆಂಗಳೂರು. | ಸದಸ್ಯರು |
| 3 | ಶ್ರೀ ಹರೀಶ್ ಹಂದೆ, ಸಿಎಂಡಿ, ಸೆಲ್ಕೊ (SELCO). | ಸದಸ್ಯರು |
| 4 | ಡಾ: ಅಂಶು ಭಾರದ್ವಾಜ್, ನಿರ್ದೇಶಕರು, ಸಿ-ಸ್ಟೆಪ್ (C-STEP)., ಬೆಂಗಳೂರು. | ಸದಸ್ಯರು |
| 5 | ಶ್ರೀ ಜಿಎಂ. ಪಿಳ್ಳೈ, ಡೈರೆಕ್ಟರ್ ಜನರಲ್ ವರ್ಲ್ಡ್ ಇನ್‌ಸ್ಟಿಟ್ಯೂಟ್ ಆಫ್ ಸಸ್ಟೇನೇಬಲ್ ಎನರ್ಜಿ | ಸದಸ್ಯರು |
| 6 | ಪ್ರೊ: ಬಿ.ಎಸ್. ರಘುನಂದನ್, ಅಧ್ಯಕ್ಷರು, ಸಿಇಸಿ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು. | ಸದಸ್ಯರು |
| 7 | ಡಾ: ಜಿ.ಎಸ್. ಪ್ರಭು, ಹೆಚ್ಚುವರಿ ಪ್ರಾಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸಂಯೋಜಕರು ಬೆರಿ ಪ್ರಾಜೆಕ್ಟ್ (BERI Project) | ಸದಸ್ಯರು |
| 8 | ಡಾ: ದಯಾನಂದ, ಹಿರಿಯ ವಿಜ್ಞಾನಿ, ಎನ್‌ಎಎಲ್., ಬೆಂಗಳೂರು. | ಸದಸ್ಯರು |
| 9 | ಶ್ರೀ ಮಿನಿ ಶಾಸ್ತ್ರಿ, ಎನಜಿ ಕನ್ಸರ್ವೇಶನ್, ಟೆರಿ (TERI), ಬೆಂಗಳೂರು. | ಸದಸ್ಯರು |
| 10 | ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್. | ಸಂಚಾಲಕರು |

ಈ ಕೆಳಕಂಡ ಅಧಿಕಾರಿಗಳು ಯೋಜನಾ ತಂಡದ ಆಹ್ವಾನಿತರಾಗಿರುತ್ತಾರೆ:

1. ವ್ಯವಸ್ಥಾಪಕ ನಿರ್ದೇಶಕರು, ಕೆಪಿಟಿಸಿಎಲ್.
2. ವ್ಯವಸ್ಥಾಪಕ ನಿರ್ದೇಶಕರು, ಕೆಪಿಸಿಎಲ್.
3. ವ್ಯವಸ್ಥಾಪಕ ನಿರ್ದೇಶಕರು, ಪಿಸಿಕೆಎಲ್.
4. ವ್ಯವಸ್ಥಾಪಕ ನಿರ್ದೇಶಕರು, ಬೆಸ್ಕಾಂ.
5. ಸರ್ಕಾರದ ಮುಖ್ಯ ವಿದ್ಯುತ್ ಪರಿವೀಕ್ಷಕರು, (CEIG) ವಿದ್ಯುತ್ ಪರಿವೀಕ್ಷಣಾಲಯ.

ಈ ತಂಡವು ರಾಜ್ಯದಲ್ಲಿ ನವೀಕರಿಸಬಹುದಾದ ಇಂಧನ ಮತ್ತು ವ್ಯವಹಾರಗಳನ್ನು ಅಭಿವೃದ್ಧಿಪಡಿಸಲು ಆದಿಂದಾಗ್ಗೆ ಮಾರ್ಗದರ್ಶನವನ್ನು ನೀಡುವುದು.

ಆರ್ಥಿಕ ಸಂಸ್ಥೆಗಳು / ಬ್ಯಾಂಕುಗಳು ಹಾಗೂ ಮತ್ತಿತರ ಏಜೆನ್ಸಿಗಳೊಂದಿಗೆ ಕ್ರಮ ಬದ್ಧವಾಗಿ ಸಂವಾದಗಳನ್ನು ನಡೆಸಿ ನವೀಕರಿಸಬಹುದಾದ ಇಂಧನ ಯೋಜನೆಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಎದುರಾಗಬಹುದಾದ ತೊಡಕುಗಳನ್ನು ನಿವಾರಿಸಲು ಸಹಕರಿಸುವುದು.

ಇಂಧನ ದಕ್ಷತೆ ಹಾಗೂ ಇಂಧನ ಸಂರಕ್ಷಣೆ ಕಡೆಗೂ ನಿಗಾವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್.ಬಿ. ಕೃಷ್ಣಪ್ಪನವರ್**

ಪಿ.ಆರ್. 815

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಸತ್ಯನಾರಾಯಣ, ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಪಲಿಮಾರು, ಉಡುಪಿ ತಾ/ಜಿಲ್ಲೆ ಇವರ ಹಿಂದಿನ ಸೇವೆಯನ್ನು ಅರ್ಹತಾದಾಯಕ ಸೇವೆ ಎಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ ಇವರ ಪತ್ರ ಸಂಖ್ಯೆ: ಪಪೂಶಿಇ/ಸಿಬ್ಬಂದಿ-3/ಹಿಂಸೇವೆ/ಎಸ್‌ಯು-12/1/2010-11, ದಿನಾಂಕ: 28-10-2011

**ಪ್ರಸ್ತಾವನೆ :**

ಶ್ರೀ ಸತ್ಯನಾರಾಯಣ, ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಪಲಿಮಾರು, ಉಡುಪಿ ತಾ/ಜಿಲ್ಲೆ ಇವರು ಈ ಹಿಂದೆ ದಿನಾಂಕ: 22-11-1996 ರಿಂದ 15-09-2005ರ ವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪ್ರಾಥಾಮಿಕ ಶಾಲಾ ಸಹಶಿಕ್ಷಕರಾಗಿ ಹಾಗೂ ದಿನಾಂಕ: 16-09-2005 ರಿಂದ 25-09-2009ರ ವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪೌಢಶಾಲಾ ಸಹಶಿಕ್ಷಕರ ಹುದ್ದೆಯಲ್ಲಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 224-ಎ ರನ್ವಯ ಪ್ರಸಕ್ತ ಸೇವೆಯ ನಿವೃತ್ತಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮಾಡಿರುವ ಶಿಫಾರಸ್ಸಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಿದೆ:-

**ಸರ್ಕಾರಿ ಆದೇಶ ಸಂಖ್ಯೆ: ಇಡಿ 106 ಡಿಜಿಡಿ 2011, ಬೆಂಗಳೂರು, ದಿನಾಂಕ: 08-03-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ಸತ್ಯನಾರಾಯಣ, ಆಂಗ್ಲಭಾಷಾ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಪಲಿಮಾರು, ಉಡುಪಿ ತಾಲ್ಲೂಕು ಮತ್ತು ಜಿಲ್ಲೆ, ಇವರು ಪ್ರಸ್ತುತ ಸೇವೆಗೆ ಸೇರುವ ಮುನ್ನ ದಿನಾಂಕ: 22-11-1996 ರಿಂದ 15-09-2005ರ ರವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪ್ರಾಥಮಿಕ ಶಾಲಾ ಸಹಶಿಕ್ಷಕರಾಗಿ ಹಾಗೂ ದಿನಾಂಕ: 16-09-2005 ರಿಂದ 25-09-2009ರ ವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಪೌಢಶಾಲಾ ಸಹಶಿಕ್ಷಕರಾಗಿ ಸಲ್ಲಿಸಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 224-ಎ ರನ್ವಯ ಪ್ರಸ್ತುತ ಸೇವೆಯ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಹೆಚ್.ಕುರಿಯವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 816

ಶಿಕ್ಷಣ ಇಲಾಖೆ (ಪದವಿಪೂರ್ವ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ)., ಮಂಡ್ಯ – ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಸಂಸ್ಥೆಯಿಂದ ಪಡೆದಿದ್ದ ಸಾಲದ ಮರುಪಾವತಿಗಾಗಿ (ದಿನಾಂಕ: 31–12–2011 ಹಾಗೂ 31–03–2012 ತ್ರೈಮಾಸಿಕದ ಅಂತ್ಯಕ್ಕೆ) ಸರ್ಕಾರದಿಂದ ಅಸಲು ಮತ್ತು ಬಡ್ಡಿ ಪಾವತಿ ಮಾಡಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಐ 184 ಎಸ್‌ಜಿಎಫ್ 2007 ದಿನಾಂಕ: 26–03–2010.
2. ಸರ್ಕಾರದ ಆದೇಶ ಸಂಖ್ಯೆ: ಸಿಐ 184 ಎಸ್‌ಜಿಎಫ್ 2007 ದಿನಾಂಕ: 23–07–2010.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 184 ಎಸ್‌ಜಿಎಫ್ 2007(3)ದಿನಾಂಕ:18–12–2010.
4. ಸರ್ಕಾರದ ಆದೇಶ ಸಂಖ್ಯೆ: ಸಿಐ 08 ಎಸ್‌ಜಿಎಫ್ 2011, ದಿನಾಂಕ: 05–04–2011.
5. ಸರ್ಕಾರದ ಆದೇಶ ಸಂಖ್ಯೆ: ಸಿಐ 08 ಎಸ್‌ಜಿಎಫ್ 2011, ದಿನಾಂಕ: 18–11–2011.
6. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 263 ಬಿಆರ್‌ಎಸ್ 2011, ದಿನಾಂಕ: 25–02–2012.

**ಪ್ರಸ್ತಾವನೆ :**

ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ, ಈ ಕಾರ್ಖಾನೆಯಲ್ಲಿ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಹಣಕಾಸು ಸಂಸ್ಥೆಯಿಂದ ರೂ.5726.16 ಲಕ್ಷಗಳ ಸಾಲ ಪಡೆಯಲು ದಿನಾಂಕ: 30–07–2001 ರಂದು ಕಾರ್ಖಾನೆಯು ಹುಡ್ಕೋದೊಂದಿಗೆ ಒಪ್ಪಂದ ಮಾಡಿಕೊಂಡಿದ್ದು, ರಾಜ್ಯ ಸರ್ಕಾರವು ಸದರಿ ಸಾಲಕ್ಕೆ ಗ್ಯಾರಂಟಿ ನೀಡಿದ್ದು, ಮೇಲೆ ಓದಲಾದ (1), (2), (3), (4) ಮತ್ತು (5) ರಲ್ಲಿರುವ ಆದೇಶಗಳಲ್ಲಿ ಹುಡ್ಕೋ ಸಂಸ್ಥೆಯು ಮಾಡಿದ OTS offer ನಂತೆ ಸಾಲ ಮತ್ತು ಬಡ್ಡಿ ಪಾವತಿಗಾಗಿ ಒಟ್ಟು ರೂ.6148.99 ಲಕ್ಷಗಳನ್ನು ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ, ಇವರ ಕೋರಿಕೆಯ ಮೇರೆಗೆ ಆರ್ಥಿಕ ಇಲಾಖೆಯು ಮೇಲೆ ಓದಲಾದ (6) ರಲ್ಲಿರುವ ಆದೇಶದಲ್ಲಿ ಹುಡ್ಕೋ ಸಂಸ್ಥೆಗೆ ದಿನಾಂಕ: 31–12–2011 ಹಾಗೂ 31–03–2012ರ ತ್ರೈಮಾಸಿಕದ ಅಂತ್ಯಕ್ಕೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ ಒಟ್ಟು ರೂ.668.29 ಲಕ್ಷಗಳನ್ನು ಪಾವತಿಸುವ ಸಲುವಾಗಿ ಲೆಕ್ಕಶೀರ್ಷಿಕೆ 4860–04–190–1–00–211 Investment (plan) ಅಡಿಯಲ್ಲಿ ರೂ.668.29 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಒದಗಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 08 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ: 06–03–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ, ಈ ಕಾರ್ಖಾನೆಯ ಸಹವಿದ್ಯುತ್ ಘಟಕ ಸ್ಥಾಪನೆಗಾಗಿ ಮತ್ತು ಶುಗರ್ಸ್ ಗೋಡೌನ್ ಕಟ್ಟಲು ಹುಡ್ಕೋ ಹಣಕಾಸು ಸಂಸ್ಥೆಯಿಂದ ಪಡೆಯಲಾಗಿದ್ದ ರೂ.5726.16 ಲಕ್ಷಗಳ ಸಾಲದ ಮರುಪಾವತಿ ಸಂಬಂಧ ಹುಡ್ಕೋ ಸಂಸ್ಥೆಯು ಮಾಡಿರುವ OTS offer ನಂತೆ ದಿನಾಂಕ: 31–12–2011 ಹಾಗೂ 31–03–2012ರ ತ್ರೈಮಾಸಿಕದ ಅಂತ್ಯಕ್ಕೆ ಪಾವತಿಸಬೇಕಾದ ಅಸಲು ಮತ್ತು ಬಡ್ಡಿ ಸೇರಿ ಒಟ್ಟು ರೂ.668.29 ಲಕ್ಷಗಳನ್ನು (ಆರು ನೂರ ಅರವತ್ತೆಂಟು ಲಕ್ಷ ಮತ್ತು ಇಪ್ಪತ್ತೊಂಬತ್ತು ಸಾವಿರ ರೂಪಾಯಿಗಳು ಮಾತ್ರ) ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

OTS offer ನಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳಂತೆ ಬಾಕಿ ಇರುವ ಹಣವನ್ನು ಕಾಲಕಾಲಕ್ಕೆ ಕಾರ್ಖಾನೆಯು ಬಡ್ಡಿಯೊಂದಿಗೆ ಹುಡ್ಕೋ ಸಂಸ್ಥೆಗೆ ಮರುಪಾವತಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು.

2011–12ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಲೆಕ್ಕ ಶೀರ್ಷಿಕೆ "4860–04–190–1–00–211 Investment (plan)" ಅಡಿಯಲ್ಲಿ 2011–12ನೇ ಸಾಲಿಗೆ ಒದಗಿಸಲಾಗಿರುವ ಹೆಚ್ಚುವರಿ ಅನುದಾನದಲ್ಲಿ ರೂ.668.29 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು, ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ), ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 260 ವೆಚ್ಚ–1/2011, ದಿನಾಂಕ: 28–02–2012 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಿವಶಂಕರ್ ನಾಯಕ್. ಎಲ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 817

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತದ ಅಧ್ಯಕ್ಷರ ಕಛೇರಿಗೆ ಒಂದು ವಾಹನ ಚಾಲಕ ಹುದ್ದೆಯನ್ನು ಸೃಜಿಸುವ ಬಗ್ಗೆ.–

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ರವರ ಪತ್ರ ಸಂ. ಕೆ.ಪಿ.ಎಲ್.ಸಿ./ಎ.ಸಿ.ಟಿ.–133/2011–12, ದಿನಾಂಕ 19–01–2012.

**ಪ್ರಸ್ತಾವನೆ :**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತ ರವರು ದಿನಾಂಕ 19–1–2012ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ, ದಿನಾಂಕ 24–12–2009 ರಂದು ನಡೆದ ಮಂಡಳಿ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದಂತೆ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತದ ಅಧ್ಯಕ್ಷರ ಕಛೇರಿಗೆ ಒಂದು ವಾಹನ ಚಾಲಕ ಹುದ್ದೆಯನ್ನು ಸೃಜಿಸಲು ತೀರ್ಮಾನಿಸಲಾಗಿದೆಯೆಂದು, ಪ್ರಸ್ತುತ ಒಬ್ಬ ವಾಹನ ಚಾಲಕರನ್ನು ಹೊರಗುತ್ತಿಗೆ ಮೂಲಕ ಮಾಸಿಕ ರೂ. 8,000/– ಸಂಚಿತ ವೇತನದಲ್ಲಿ ತೆಗೆದುಕೊಂಡು ಕಾರ್ಯನಿರ್ವಹಿಸಲಾಗುತ್ತಿದೆ ಎಂದು ತಿಳಿಸಿ ವಾಹನ ಚಾಲಕರ ಹುದ್ದೆಯನ್ನು ಸೃಜಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತರವರ ದಿನಾಂಕ 19-01-2012ರ ಪತ್ರದಲ್ಲಿನ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 50 ಎಲ್.ಜಿ.ಬಿ. 2012, ಬೆಂಗಳೂರು, ದಿನಾಂಕ 02-03-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮ ನಿಯಮಿತದ ಅಧ್ಯಕ್ಷರ ಕಛೇರಿಗೆ ಒಂದು ವಾಹನ ಚಾಲಕರ ಹುದ್ದೆಯನ್ನು ಸೃಜಿಸಿ ಆದೇಶಿಸಿದೆ. ಈ ಹುದ್ದೆಯನ್ನು ನಿಯೋಜನೆ ಮೇಲೆ ಅಥವಾ ಹೊರಗುತ್ತಿಗೆ ಮೂಲಕ ಭರ್ತಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 146 ವೆಚ್ಚ-7/2012, ದಿನಾಂಕ 28-02-2012ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಕೆ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ.)

ಪಿ.ಆರ್. 818

## ಕಂದಾಯ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಕೇಂದ್ರ ಕೈಗಾರಿಕಾ ಭದ್ರತಾ ಪಡೆ (ಸಿ.ಐ.ಎಸ್.ಎಫ್.) ಕೇಂದ್ರವನ್ನು ಸ್ಥಾಪಿಸಲು ಸರ್ಕಾರಿ ಜಮೀನು ಮಂಜೂರು ಮಾಡುವ ಬಗ್ಗೆ.–

**ಓದಲಾಗಿದೆ :**
1) ಡೈರೆಕ್ಟರ್ ಜನರಲ್ ಸೆಂಟ್ರಲ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್, ನವದೆಹಲಿ ರವರ ಪತ್ರ ಸಂಖ್ಯೆ: ಡಿಓಸಿ-11020(3)02/10/ಲ್ಯಾಂಡ್/ಆರ್.ಬಿ.ಡಬ್ಲ್ಯೂ/ವರ್ಕ್ಸ್-330, ದಿನಾಂಕ 10-03-2010.
2) ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್.ಎನ್.ಡಿ./ಸಿ.ಆರ್ 12/11-12, ದಿನಾಂಕ 20-08-2011.
3) ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ಪತ್ರ ಸಂಖ್ಯೆ: ಎಲ್.ಎನ್.ಡಿ.(ಪಿ)/ಸಿ.ಆರ್.39/2010-11, ದಿನಾಂಕ 26-11-2011.

**ಪ್ರಸ್ತಾವನೆ :**

ಡೈರೆಕ್ಟರ್ ಜನರಲ್ ಸೆಂಟ್ರಲ್ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್, ನವದೆಹಲಿ ರವರ ದಿನಾಂಕ 10-03-2010ರ ಪತ್ರದಲ್ಲಿ ರಾಜ್ಯದಲ್ಲಿ ಕೇಂದ್ರ ಕೈಗಾರಿಕಾ ಭದ್ರತಾ ಪಡೆ (ಸಿ.ಐ.ಎಸ್.ಎಫ್.) ಕೇಂದ್ರವನ್ನು ಸ್ಥಾಪಿಸಲು ಬೆಂಗಳೂರು ನಗರ ಅಥವಾ ಸುತ್ತಮುತ್ತಲ ಪ್ರದೇಶದಲ್ಲಿ 100 ಎಕರೆ ಜಮೀನನ್ನು ಮಂಜೂರು ಮಾಡುವಂತೆ ಕೋರಿಕೊಂಡಿದ್ದರು.

2. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರು 20-08-2011ರ ಪತ್ರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ಲಕ್ಕೂರು ಗ್ರಾಮದ ಸ.ನಂ. 51ರಲ್ಲಿ 32.01 ಎ/ಗುಂ ಸ.ನಂ. 43ರಲ್ಲಿ 23.35 ಎ/ಗುಂ ಒಟ್ಟು 55.36 ಎ/ಗುಂ ಗೋಮಾಳ ಜಮೀನನ್ನು ಕೇಂದ್ರ ಕೈಗಾರಿಕಾ ಭದ್ರತಾ ಪಡೆ ಕೇಂದ್ರ ಸ್ಥಾಪನೆಗಾಗಿ ಮಂಜೂರು ಮಾಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

3. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ದಿನಾಂಕ 26-11-2011ರ ಪತ್ರದಲ್ಲಿ ಜಿಲ್ಲೆಯಲ್ಲಿ ಬೇರೆ ಕಡೆ ಒಂದೇ ಪ್ರದೇಶದಲ್ಲಿ ಕನಿಷ್ಠ 50 ಎಕರೆ ಸರ್ಕಾರಿ ಜಮೀನು ಅಥವಾ ಸರ್ಕಾರಿ ಗೋಮಾಳ ಲಭ್ಯವಿರುವುದಿಲ್ಲ ಎಂಬುದಾಗಿ ವರದಿ ಮಾಡುತ್ತಾ, ಈ ಹಿಂದೆ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರಿಗೆ ವಿಳಾಸಿಸಿ ಬರೆದಿರುವ ದಿನಾಂಕ 20-4-2011ರ ಸಲ್ಲಿಸಿರುವ ಪ್ರಸ್ತಾವನೆಯಲ್ಲಿನ ಜಮೀನು ರಾಷ್ಟ್ರೀಯ ಹೆದ್ದಾರಿ-4ಕ್ಕೆ ಹೊಂದಿಕೊಂಡಿದ್ದು, ನೆಲಮಂಗಲ ತಾಲ್ಲೂಕಿನ ಸೋಂಪುರ ಗ್ರಾಮದಿಂದ 1 ಕಿ.ಮೀ. ದೂರದಲ್ಲಿರುತ್ತದೆ. ಸದರಿ ಜಮೀನನ್ನು ಅರಣ್ಯ ಇಲಾಖೆಯ ಅಧಿಕಾರಿಗಳೊಂದಿಗೆ ಸ್ಥಳ ತನಿಖೆ ಮಾಡಿ ಸ್ಥಳ ಟಿಪ್ಪಣಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ಲಕ್ಕೂರು ಗ್ರಾಮದ ಸರ್ವೆ ಸಂ. 43ರಲ್ಲಿ ಉಳಿದಿರುವ 23.35 ಎಕರೆ ಸರ್ಕಾರಿ ಖರಾಬು ಜಮೀನು ಮತ್ತು ಸದರಿ ಗ್ರಾಮದ ಸ.ನಂ. 51ರಲ್ಲಿನ 32.01 ಎಕರೆ ಒಟ್ಟು 55.36 ಎ/ಗುಂ ಜಮೀನನ್ನು ಸಿ.ಐ.ಎಸ್.ಎಫ್. ರವರಿಗೆ ನೀಡುವ ಬಗ್ಗೆ ಅರಣ್ಯ ಇಲಾಖೆಯ ತಕರಾರು ಇರುವುದಿಲ್ಲವಾದ್ದರಿಂದ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಮಂಜೂರು ಮಾಡಲು ಸರ್ಕಾರದ ಹಂತದಲ್ಲಿ ತೀರ್ಮಾನ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 263 ಎಲ್.ಜಿ.ಬಿ. 2010, ಬೆಂಗಳೂರು, ದಿನಾಂಕ 28-02-2012**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಸೋಂಪುರ ಹೋಬಳಿ, ಲಕ್ಕೂರು ಗ್ರಾಮದ ಸ.ನಂ. 43ರಲ್ಲಿನ 23.35 ಎಕರೆ ಸರ್ಕಾರಿ ಖರಾಬು ಜಮೀನು ಮತ್ತು ಸ.ನಂ. 51ರಲ್ಲಿನ 32.01 ಎ/ಗುಂ ಸರ್ಕಾರಿ ಗೋಮಾಳ ಒಟ್ಟು 55.36 ಎ/ಗುಂ ಸರ್ಕಾರಿ ಜಮೀನನ್ನು ಕರ್ನಾಟಕ ಭೂ-ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಸಾರ್ವಜನಿಕರ ರಸ್ತೆಗೆ ತಡೆ ಉಂಟು ಮಾಡಬಾರದೆಂಬ ಷರತ್ತನ್ನು ವಿಧಿಸಿ ಸದರಿ ಜಮೀನಿನ ಮಾರ್ಗಸೂಚಿ ದರ ಪಾವತಿಸಿಕೊಂಡು ಕೇಂದ್ರ ಕೈಗಾರಿಕಾ ಭದ್ರತಾ ಪಡೆ (ಸಿ.ಐ.ಎಸ್.ಎಫ್.)ಗೆ ಮಂಜೂರು ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ಕೆ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ)

ಪಿ.ಆರ್. 819

## ತೋಟಗಾರಿಕಾ ಸಚಿವಾಲಯ

**ವಿಷಯ :** ತಾಳೆಬೆಳೆ ಅಭಿವೃದ್ಧಿ ಯೋಜನೆಯಡಿ ತಾಳೆಬೆಳೆ ಅಭಿವೃದ್ಧಿ ಪಡಿಸುತ್ತಿರುವ ಮೆ: ಪಾಮ್‌ಟೆಕ್ ಇಂಡಿಯಾ ಲಿ., ಮೈಸೂರು ಸಂಸ್ಥೆಯ ಹೆಸರನ್ನು ಮೆ: ರುಚಿಸೋಯಾ ಇಂಡಸ್ಟ್ರೀಸ್ ಲಿಮಿಟೆಡ್ ಎಂದು ಬದಲಾಯಿಸುವ ಬಗ್ಗೆ.–

**ಓದಲಾಗಿದೆ :** 1)ಸರ್ಕಾರದ ಆದೇಶ ಸಂಖ್ಯೆ: AHD 245 HPP 97, ದಿನಾಂಕ 10–11–1998

2) ಸರ್ಕಾರದ ಆದೇಶ ಸಂಖ್ಯೆ: AHD 45 HGM 2004, ದಿನಾಂಕ 28–05–2004

3) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 280 ತೋಇವಿ 2005, ದಿನಾಂಕ 17–12–2005

4) ಸರ್ಕಾರದ ಆದೇಶ ಸಂಖ್ಯೆ: ಕೃತೋಇ 121 ತೋಸೇಪ 2010, ದಿನಾಂಕ 02–07–2010

5) ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ತೋನಿ/ತೋಅನಿ/ತಾಬೆಯೋ/ಸತೋಅ–2/114/2010–11/95, ದಿನಾಂಕ 21–04–2011, ಸಂಖ್ಯೆ: 893, ದಿನಾಂಕ 01–08–2011, ಸಂಖ್ಯೆ: 1189, ದಿನಾಂಕ 23–09–2011.

**ಪ್ರಸ್ತಾವನೆ :**

ಮೇಲೆ ಕ್ರ.ಸಂ.: 4ರಲ್ಲಿ ಓದಲಾದ ಆದೇಶದಲ್ಲಿ 5 ಖಾಸಗಿ ಸಂಸ್ಥೆಗಳಿಗೆ ತಾಳೆಬೆಳೆ ಪ್ರದೇಶ ಅಭಿವೃದ್ಧಿಪಡಿಸಲು ಪ್ರದೇಶಗಳನ್ನು ಗುರುತಿಸಿ ಆದೇಶ ಹೊರಡಿಸಲಾಗಿದೆ. ಮೇಲೆ ಕ್ರ.ಸಂ. 5ರಲ್ಲಿ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರಗಳಲ್ಲಿ ಮೆ: ಪಾಮ್‌ಟೆಕ್ ಇಂಡಿಯಾ ಲಿ., ಮೈಸೂರು ಸಂಸ್ಥೆಯು ನೆರೆಯ ರಾಜ್ಯವಾದ ಆಂಧ್ರ ಪ್ರದೇಶದಲ್ಲಿ ತಾಳೆಬೆಳೆ ಅಭಿವೃದ್ಧಿ ಯೋಜನೆಯಲ್ಲಿ ತೊಡಗಿಸಿಕೊಂಡಿರುವ ಮೆ: ರುಚಿ ಸೋಯಾ ಇಂಡಸ್ಟ್ರೀಸ್ ಸಂಸ್ಥೆಯೊಂದಿಗೆ ಸಂಯೋಜನೆಗೊಂಡಿರುವುದರಿಂದ ಮೆ: ರುಚಿ ಸೋಯಾ ಇಂಡಸ್ಟ್ರೀಸ್ ಸಂಸ್ಥೆಯು ಮೆ: ಪಾಮ್‌ಟೆಕ್ ಇಂಡಿಯಾ ಲಿ., ಮೈಸೂರು ಸಂಸ್ಥೆಯ ಸಂಪೂರ್ಣ ಷೇರು ಬಂಡವಾಳವನ್ನು ಖರೀದಿಸಿರುವುದರಿಂದ ಸಂಸ್ಥೆಯ ಹೆಸರನ್ನು ಮೆ: ರುಚಿ ಸೋಯಾ ಇಂಡಸ್ಟ್ರೀಸ್ ಎಂದು ಬದಲಾಗಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಮೆ: ಪಾಮ್‌ಟೆಕ್ ಇಂಡಿಯಾ ಲಿ., ಮೈಸೂರು ಸಂಸ್ಥೆಯನ್ನು ಮೆ: ರುಚಿ ಸೋಯಾ ಇಂಡಸ್ಟ್ರೀಸ್ ಸಂಸ್ಥೆಯೊಂದಿಗೆ ವಿಲೀನಗೊಳಿಸಲು ಆಂಧ್ರಪ್ರದೇಶ ಉಚ್ಚನ್ಯಾಯಾಲಯ ನೀಡಿರುವ ಆದೇಶದ ದಾಖಲಾತಿಗಳನ್ನು ಸಲ್ಲಿಸುತ್ತಾ ಮೆ: ಪಾಮ್‌ಟೆಕ್ ಇಂಡಿಯಾ ಲಿ., ಸಂಸ್ಥೆಗೆ ವಹಿಸಿದ್ದ ತಾಳೆಬೆಳೆ ಅಭಿವೃದ್ಧಿ ಯೋಜನೆಯ ಪ್ರದೇಶವನ್ನು ಮೆ: ರುಚಿ ಸೋಯಾ ಇಂಡಸ್ಟ್ರೀಸ್ ಸಂಸ್ಥೆಗೆ ಮರು ಹಂಚಿಕೆ ಮಾಡಿ ಆದೇಶ ಹೊರಡಿಸಲು ಕೋರಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 282 ತೋಇವಿ 2011, ಬೆಂಗಳೂರು, ದಿನಾಂಕ 25–02–2012**

ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ದಿನಾಂಕ 02–07–2010ರ ಸರ್ಕಾರದ ಆದೇಶದಲ್ಲಿ ಮೈಸೂರು, ಕೊಡಗು, ಮಂಡ್ಯ ಜಿಲ್ಲೆ ಹಾಗೂ ಹಾಸನ ಜಿಲ್ಲೆಯ ಆಲೂರು ಹೊಳೆನರಸೀಪುರ, ಸಕಲೇಶಪುರ, ಬೇಲೂರು, ಅರಸೀಕೆರೆ ಮತ್ತು ಅರಕಲಗೂಡು ತಾಲ್ಲೂಕುಗಳಲ್ಲಿ ತಾಳೆ ಪ್ರದೇಶವನ್ನು ಅಭಿವೃದ್ಧಿ ಪಡಿಸಲು ವಹಿಸಲಾಗಿದ್ದ ಸಂಸ್ಥಯ ಹೆಸರನ್ನು ಮೆ: ಪಾಮ್‌ಟೆಕ್ ಇಂಡಿಯಾ ಲಿ., ಮೈಸೂರು ಎಂಬುದರ ಬದಲಾಗಿ ಮೆ: ರುಚಿ ಸೋಯಾ ಇಂಡಸ್ಟ್ರೀಸ್ ಲಿಮಿಟೆಡ್ ಎಂದು ಬದಲಾಯಿಸಲು ಉಲ್ಲೇಖ (4)ರ ಆದೇಶದಲ್ಲಿನ ಈ ಕೆಳಕಂಡ ಷರತ್ತು ನಿಬಂಧನೆಗಳನ್ನು mutatis mutandis ಅನ್ವಯಿಸಿ ಅನುಮೋದನೆ ನೀಡಲಾಗಿದೆ.

**TERMS AND CONDITIONS**

1. ಮೆ: ರುಚಿ ಸೋಯಾ ಇಂಡಸ್ಟ್ರೀಸ್ ಲಿಮಿಟೆಡ್ ಸಂಸ್ಥೆಯು ರೂ. 1.00 ಲಕ್ಷ ವರ್ಗಾವಣೆ ಫೀಯನ್ನು ಸರ್ಕಾರಕ್ಕೆ ಪಾವತಿಸತಕ್ಕದ್ದು ಹಾಗೂ ಸಂಸ್ಥೆಯು ಕೂಡಲೇ ಸಂಸ್ಕರಣಾ ಘಟಕ ಪ್ರಾರಂಭಿಸಿ ಯೋಜನೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸುವುದು.
2. The company and the Nodal Departmental Officers jointly shall be responsible for planning and systematic implementation of the program. They will be responsible for planning of area expansion, production of requisite number of seedlings (indigenous and exotic), On-farm-investment (OFI) subsidy to be distributed in advance (atleast one year in advance).
3. The company shall have their own extension support staff including technical and field personnel and will be accountable for area expansion program, nursery development, timely distribution of input subsidy, planting material production, procurement of FFBs etc. and the Nodal Departmental Officers will over see proper positions the appointment of staff and effective implementation of the program.
4. The company will be responsible for taking up nursery activities for raising oil palm seedlings, distribute seedlings to the farmers for undertaking area expansion distribute inputs to the farmers in the form of fertilizers and plant protection chemicals and render accurate documents, to ensure certification process related to distribution of inputs.
5. The cost of seedlings is Rs. 60/-for indigenous and Rs. 70/-for exotic. The subsidy per seedling is Rs. 50/- The company will collect Rs. 10/per seedling for indigenous and Rs. 20/-per seedling for exotic seedlings as differential cost of seedling from the farmer at the time of supply of seedlings. In case the farmers donot agree to pay the differential cost of seedling, it will be adjusted by the company against the farmer’s eligible OFI subsidy.
6. The company will adjust a sum of Rs. 12/- per seedling as transportation cost against the eligible OFI subsidy of the farmers, in case the farmers do not pay the transportation cost of the seedlings.
7. The company will be eligible for advance planting material subsidy for raising nursery, The seedling subsidy @ 80% of the seedling subsidy for 80% of the actual number of sprouts imported/procured will be considered. This will be released on production of documents showing the procurement/import of sproutsand sowing, duly certified by Nodal Project officers. Before release of advance subsidy, the entrepreneur should give a bank guarantee as security for the amount being paid to them. The bank guarantee should be for the period adequately sufficient for which the subsidy is proposed to be utilized. The balance would be released only after certified quality seedlings are distributed to the

3. All Heads of Deaprtments shall immediately hold strategy sessions with their respective field officers and use their exisiting monitoring mechanism like MPIC to measure the success in the performance of various activities stated in the RFD; and where necessary by augmenting/supplementing the quality of current monitoring practices/tools used in the departments.
4. FPI will provide support in the form of training and capacity building, issue of guidelines, holding workshops, seminars, strategy sessions relating to RFD including engaging experts for short term assignments. For this purpose the funds under Plan Scheme Demand No. 2052 03 2052-00-090-0-21, Program Performance Budget and Program Evaluation would be used by FPI.
5. The performance of RFD 2011-12 shall to be evaluated by the Task Force by may 2012 and the finding be brought before the Cabinet by June 2012.
6. That Department of Information and Public Relations will also take necessary steps to increase awareness of Citizens on the use of RFDs so evolved and the success at the end of the year.
7. And that all the Departments shall prepare their RFD 2012-13 before April 30th 2012 and bring out into the public domain.
8. Planning, Programme Monitoring and Statistics Department, Gok shall hence forth be responsible for effective execution of RFD.

The above order issues with the approval of the Cabinet vide case No. C 628/2012 Dated: 3-1-2012.

By Order and in the name of Governor of Karnataka,
**M.G. Mulakur**
Under Secretary to Government, (S-1&2)
Planning, Programme Monitoring and
Statistics Department

P.R. 835

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲ್ಲೂಕಿನ ಶಿವಯೋಗ ಮಂದಿರ ಗ್ರಾಮದಲ್ಲಿ ಹೊಸದಾಗಿ ಪಶುಚಿಕಿತ್ಸಾಲಯ ಸ್ಥಾಪಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ: ಆಪಸಂ/ಡಿವಿಡಿ-3/ವಿವ-24/2007-08, ದಿನಾಂಕ: 14-05-2010, 17-03-2011 ಮತ್ತು 10-11-2011.

**ಪ್ರಸ್ತಾವನೆ :**

ಮಾನ್ಯ ಮುಖ್ಯಮಂತ್ರಿಯವರು ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲ್ಲೂಕಿನ ಶಿವಯೋಗ ಮಂದಿರದ ಶತಮಾನೋತ್ಸವ ಹಾಗೂ ಅಖಿಲ ಭಾರತ ವೀರಶೈವ ಮಹಾಸಭೆಯ ಶತಮಾನೋತ್ಸವ ಕಾರ್ಯಕ್ರಮದಲ್ಲಿ ರೈತಾಪಿ ವರ್ಗದ ಹಿತದೃಷ್ಟಿಯಿಂದ ಶಿವಯೋಗ ಮಂದಿರ ಗ್ರಾಮದಲ್ಲಿ ಹೊಸದಾಗಿ ಪಶು ಆಸ್ಪತ್ರೆ ಸ್ಥಾಪಿಸುವುದಾಗಿ ಘೋಷಿಸಿರುತ್ತಾರೆ.

ಮಾನ್ಯ ಮುಖ್ಯಮಂತ್ರಿಯವರ ಘೋಷಣೆಯನ್ನಾಧರಿಸಿ, ಮೇಲೆ ಓದಲಾದ ಪತ್ರಗಳಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಡಾ: ಡಿ.ಎಂ ನಂಜುಂಡಪ್ಪರವರ ಪ್ರಾದೇಶಿಕ ಅಸಮತೋಲನಾ ವರದಿಯಂತೆ ಬಾದಾಮಿ ತಾಲ್ಲೂಕು ಅತಿ ಹಿಂದುಳಿದ ತಾಲ್ಲೂಕಾಗಿರುತ್ತದೆಂದು, ಬಾಗಲಕೋಟೆ ಜಿಲ್ಲೆಗೆ ಜಾನುವಾರು ಘಟಕಗಳ ಆಧಾರದಂತೆ 26 ಸಂಸ್ಥೆಗಳ ಅವಶ್ಯಕತೆ ಇದ್ದು ಪ್ರಸ್ತುತ 22 ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿರುವುದರಿಂದ ಇನ್ನೂ 4 ಸಂಸ್ಥೆಗಳ ಕೊರತೆ ಇರುತ್ತದೆಂದು ತಿಳಿಸಿರುತ್ತಾರೆ. ಪ್ರಸ್ತುತ ಬಾದಾಮಿ ತಾಲ್ಲೂಕಿನಲ್ಲಿ 14 ಪಶುಚಿಕಿತ್ಸಾಲಯಗಳು ಕಾರ್ಯನಿರ್ವಹಿಸುತ್ತಿದ್ದು, ಶಿವಯೋಗ ಗ್ರಾಮ ಮತ್ತು ಸುತ್ತಮುತ್ತಲಿನ ಗ್ರಾಮಗಳು 5008 ಜಾನುವಾರು ಘಟಕಗಳನ್ನು ಹೊಂದಿರುತ್ತದೆಂದು, ಸದರಿ ಗ್ರಾಮದಿಂದ 4 ಕಿ.ಮೀ. ದೂರದ ನಂದಿಕೇಶ್ವರ ಗ್ರಾಮದಲ್ಲಿ ಒಂದು ಪಶುಚಿಕಿತ್ಸಾಲಯ ಇರುತ್ತದೆಂದು ತಿಳಿಸಿರುತ್ತಾರೆ. ಶಿವಯೋಗ ಮಂದಿರದ 8 ಕಿ.ಮೀ. ವ್ಯಾಪ್ತಿಯಲ್ಲಿ ಗೋವಣಕಿ, ಮಂಗಳೂರು, ಶಿರಬಡಗಿ ಹಾಗೂ ಗೋನಾಳ ಗ್ರಾಮಗಳಿದ್ದು, ಆ ಗ್ರಾಮಗಳು ಒಟ್ಟು 10,812 ಜಾನುವಾರುಗಳನ್ನು ಹೊಂದಿರುತ್ತದೆಂದು, ಶಿವಯೋಗ ಮಂದಿರದಲ್ಲಿ ಒಂದು ಗೋಶಾಲೆ ಮತ್ತು 500 ಜಾನುವಾರುಗಳಿದ್ದು, ಸದರಿ ಗ್ರಾಮದ ಸುತ್ತಲಿನ 4 ಗ್ರಾಮಗಳಿಗೆ ಕೇಂದ್ರ ಸ್ಥಳವಾಗಿರುವುದರಿಂದ ಪಶುಚಿಕಿತ್ಸಾಲಯ ತೆರದಲ್ಲಿ ರೈತಾಪಿ ಜನರಿಗೆ ಹೆಚ್ಚು ಅನುಕೂಲವಾಗುತ್ತದೆ ಎಂದು ತಿಳಿಸಿರುತ್ತಾರೆ. ಪಶುಚಿಕಿತ್ಸಾಲಯ ತೆರೆಯಲು ಒಟ್ಟು ರೂ. 21,04,116/- ವಾಷಿಕ ವಂಟನ ಬೇಕಾಗಿದ್ದು ಸದರಿ ಹಿಂದುಳಿದ ತಾಲ್ಲೂಕುಗಳಲ್ಲಿ ಪಶುಚಿಕಿತ್ಸಾಲಯ ಸ್ಥಾಪನೆ ಕಾರ್ಯಕ್ರಮದಡಿ ಲೆಕ್ಕಶೀರ್ಷಿಕೆ: 2403-00-800-0-59 ಯೋಜನೆ, ತಾಲ್ಲೂಕು ಪಂಚಾಯತ್ ಅಡಿ ಭರಿಸಬಹುದಾಗಿರುತ್ತದೆಂದು ಮತ್ತು ಪಶುಚಿಕಿತ್ಸಾಲಯ ಸ್ಥಾಪನೆಗೆ ಒಂದು ಪಶುವೈದ್ಯಾಧಿಕಾರಿ ಹುದ್ದೆ, ಒಂದು ಪಶುವೈದ್ಯಕೀಯ ಪರೀಕ್ಷಕರ (ದರ್ಜೆ-2) ಹುದ್ದೆ ಮತ್ತು ಎರಡು ಡಿ-ದರ್ಜೆ ನೌಕರರ ಹುದ್ದೆಗಳನ್ನು ಸೃಜಿಸಬೇಕಾಗಿರುತ್ತದೆಂದು ತಿಳಿಸಿರುತ್ತಾರೆ. ಶಿವಯೋಗ ಮಂದಿರ ಗ್ರಾಮಕ್ಕೆ ಪಶುಚಿಕಿತ್ಸಾಲಯ ಅವಶ್ಯಕವಾಗಿರುವ ಕಾರಣ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಸದರಿ ಗ್ರಾಮಕ್ಕೆ ಹೊಸದಾಗಿ ಪಶುಚಿಕಿತ್ಸಾಲಯ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಶಿವಯೋಗ ಮಂದಿರದ ಸುತ್ತಮುತ್ತಲಿನ ಗೋವಣಕಿ, ಮಂಗಳೂರು, ಶಿರಬಡಗಿ ಹಾಗೂ ಗೋನಾಳ ಗ್ರಾಮಗಳಲ್ಲಿ ಯಾವುದೇ ಪಶುವೈದ್ಯಕೀಯ ಸಂಸ್ಥೆಗಳು ಇರುವುದಿಲ್ಲ. 4 ಕಿ.ಮೀ. ದೂರದ ನಂದಿಕೇಶ್ವರ ಗ್ರಾಮದಲ್ಲಿ ಒಂದು ಪಶು ಚಿಕಿತ್ಸಾಲಯವಿದ್ದು ಪ್ರಸ್ತುತ ಅಲ್ಲಿಂದಲೇ ಸದರಿ ಗ್ರಾಮಗಳಿಗೆ ಪಶುವೈದ್ಯಕೀಯ ಸೇವೆಯನ್ನು ನೀಡಲಾಗುತ್ತಿದೆ. ಗೋಶಾಲೆಯ ಹಸುಗಳು ಹಾಗೂ ಸುತ್ತಮುತ್ತಲಿನ ಗ್ರಾಮಗಳಿಗೆ ಜಾನುವಾರುಗಳ ಆರೋಗ್ಯ, ಚಿಕಿತ್ಸೆ ಮತ್ತು ಅಭಿವೃದ್ಧಿ ದೃಷ್ಟಿಯಿಂದ ಶಿವಯೋಗ ಮಂದಿರದಲ್ಲಿ ಪಶುಚಿಕಿತ್ಸಾಲಯವನ್ನು ಪ್ರಾರಂಭಿಸುವುದು ಅವಶ್ಯಕವಾಗಿರುತ್ತದೆ. ಶಿವಯೋಗ ಮಂದಿರದಲ್ಲಿ ಪಶುಚಿಕಿತ್ಸಾಲಯ ಪ್ರಾರಂಭಿಸಲು ಬಾಗಲಕೋಟೆ ಜಿಲ್ಲಾ ಪಂಚಾಯತ್‌ನ ಕೃಷಿ ಮತ್ತು ಕೈಗಾರಿಕಾ ಸ್ಥಾಯಿ ಸಮಿತಿ ಅನುಮೋದನೆ ನೀಡಿರುತ್ತದೆ. ಪಶುಚಿಕಿತ್ಸಾಲಯಕ್ಕೆ ಬೋರ್‌ವೆಲ್ ಹಾಕಿಸಲು, ಒಂದು ಎಕರೆ ನಿವೇಶನ ಒದಗಿಸಲು, ಬಾಡಿಗೆ ರಹಿತ ಕಟ್ಟಡ ನೀಡಲು, ಪ್ರತೀ ವರ್ಷ ಬರುವ ಆವರ್ತಕ ವೆಚ್ಚ ಭರಿಸಲು ನಂದಿಕೇಶ್ವರ ಗ್ರಾಮ ಪಂಚಾಯಿತಿ ಒಪ್ಪಿಗೆ ನೀಡಿರುತ್ತದೆ. ಶಿವಯೋಗ

ಮಂದಿರ ಗ್ರಾಮ ಸುತ್ತಲಿನ 4 ಗ್ರಾಮಗಳಿಗೆ ಕೇಂದ್ರ ಸ್ಥಾನವಾಗಿದ್ದು ಗೋಶಾಲೆ ಮತ್ತು ಸಾಕಷ್ಟು ಜಾನುವಾರುಗಳನ್ನು ಹೊಂದಿದ್ದು, ಹಿಂದಿನ ಕಾಲದಿಂದಲೂ ವಿಭೂತಿಗೆ ಬೇಕಾಗುವ ಕಚ್ಚಾ ಮೂಲ ವಸ್ತುಗಳನ್ನು (ಸಗಣಿ ಮತ್ತು ಗೋಮೂತ್ರ) ಒದಗಿಸುತ್ತಿದ್ದು ಅಲ್ಲಿ ಪಶುಚಿಕಿತ್ಸಾಲಯವನ್ನು ಪ್ರಾರಂಭಿಸಿದಲ್ಲಿ ಜಾನುವಾರು ಚಿಕಿತ್ಸೆ ಮತ್ತು ರೈತಾಪಿ ವರ್ಗಕ್ಕೆ ತುಂಬಾ ಅನುಕೂಲವಾಗುತ್ತದೆ. ಈ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ಇಲಾಖೆಗೆ ಒದಗಿಸಿರುವ ಯೋಜನಾ ಅನುದಾನದಲ್ಲಿ ವೆಚ್ಚ ಭರಿಸುವ ಷರತ್ತಿಗೊಳಪಡಿಸಿ ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲ್ಲೂಕಿನ ಶಿವಯೋಗ ಮಂದಿರ ಗ್ರಾಮದಲ್ಲಿ ಅಗತ್ಯ ಹುದ್ದೆಗಳೊಂದಿಗೆ ಪ್ರಸಕ್ತ ಸಾಲಿನಲ್ಲಿ ಹೊಸದಾಗಿ ಪಶುಚಿಕಿತ್ಸಾಲಯವನ್ನು ಸ್ಥಾಪಿಸಲು ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪಸಂಮೀ 180 ಪಸಸೇ 2010, ಬೆಂಗಳೂರು, ದಿನಾಂಕ: 29 ನೇ ಫೆಬ್ರವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ರೈತಾಪಿ ವರ್ಗ ಮತ್ತು ಜಾನುವಾರು ಚಿಕಿತ್ಸಾ ದೃಷ್ಟಿಯಿಂದ ಬಾಗಲಕೋಟೆ ಜಿಲ್ಲೆ, ಬಾದಾಮಿ ತಾಲ್ಲೂಕಿನ ಶಿವಯೋಗ ಮಂದಿರ ಗ್ರಾಮದಲ್ಲಿ 2011-12ನೇ ಸಾಲಿನಲ್ಲಿ ನೂತನವಾಗಿ ಪಶುಚಿಕಿತ್ಸಾಲಯನ್ನು ಸ್ಥಾಪಿಸಲು ಮಂಜೂರಾತಿ ನೀಡಿದೆ.

ಪಶುಚಿಕಿತ್ಸಾಲಯ ಸ್ಥಾಪನೆಗೆ ಅವಶ್ಯವಿರುವ ಈ ಕೆಳಕಂಡ ಹುದ್ದೆಗಳನ್ನು ಹೊಸದಾಗಿ ಸೃಜಿಸಲು ಸಹ ಅನುಮತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆ | ವೇತನ ಶ್ರೇಣಿ | ಸೃಜಿಸಬೇಕಾದ ಹುದ್ದೆ ಸಂಖ್ಯೆ |
|---|---|---|---|
| (1) | ಪಶುವೈದ್ಯಾಧಿಕಾರಿ | ರೂ. 13,000-23,850 | 01 (ಒಂದು) |
| (2) | ಪಶುವೈದ್ಯಕೀಯ ಪರೀಕ್ಷಕ | ರೂ. 6,250-12,000 | 01 (ಒಂದು) |
| (3) | ಡಿ- ದರ್ಜೆ ನೌಕರ | ರೂ.4,800-7,275 | 02 (ಎರಡು) |
| | ಒಟ್ಟು | | 04 (ನಾಲ್ಕು) |

ಪಶುಚಿಕಿತ್ಸಾಲಯ ಸ್ಥಾಪಿಸಲು ವೆಚ್ಚ ರೂ. 21,04,116-00 (ಇಪ್ಪತ್ತೊಂದು ಲಕ್ಷದ ನಾಲ್ಕು ಸಾವಿರದ ಒಂದು ನೂರಾ ಹದಿನಾರು ಮಾತ್ರ) ಗಳನ್ನು 2011-12 ನೇ ಸಾಲಿನ ಕ್ರಿಯಾ ಯೋಜನೆ ಅಡಿ ಅಳವಡಿಸಿಕೊಂಡು, ಇಲಾಖೆಗೆ ಒದಗಿಸಿರುವ ಯೋಜನಾ ಅನುದಾನದಲ್ಲಿಯೇ ಭರಿಸಿಕೊಳ್ಳತಕ್ಕದ್ದು. ಈ ಸಂಬಂಧ ಸರ್ಕಾರದಿಂದ ಹೆಚ್ಚುವರಿ ಅನುದಾನವನ್ನು ಕೋರತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ425 ವೆಚ್ಚ-4/2011, ದಿನಾಂಕ:16-12-2011, ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಪ್ರಸನ್ನ**

ಪೀಠಾಧಿಕಾರಿ-2

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,

(ಪಶುಸಂಗೋಪನೆ-ಎ)

ಪಿ.ಆರ್. 836

## ಕಂದಾಯ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆಯ ದಾವಣಗೆರೆ ಉತ್ತರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 48 ಮುಸರ 2008, ದಿನಾಂಕ: 14-10-2008

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ದಾವಣಗೆರೆ ಜಿಲ್ಲೆಯ ದಾವಣಗೆರೆ ಉತ್ತರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ದಾವಣಗೆರೆ ಉತ್ತರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ದಾವಣಗೆರೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ದಾವಣಗೆರೆ | ಸದಸ್ಯರು |
| 4 | ತಹಶೀಲ್ದಾರ್, ದಾವಣಗೆರೆ ತಾಲ್ಲೂಕು | ಸದಸ್ಯ ಕಾರ್ಯದರ್ಶಿ |
| 5 | ಶ್ರೀ ಮಂಜುನಾಥ್ ಬಿನ್ ಬಸಪ್ಪ, ಆಂಜನೇಯ ಬಡಾವಣೆ, ನಿಟುವಳ್ಳಿ (ಸಾಮಾನ್ಯ) | ಸದಸ್ಯರು |
| 6 | ಶ್ರೀಮತಿ ವಿಜಯಲಕ್ಷ್ಮೀ ಕೋಂ ಮಲ್ಲಿಕಾರ್ಜುನಪ್ಪ, ಆವರಗೆರೆ (ಮಹಿಳೆ) | ಸದಸ್ಯರು |
| 7 | ಶ್ರೀ ಎಸ್. ಬಸವರಾಜಪ್ಪ ಬಿನ್ ಹನುಮಂತಪ್ಪ, ಹಳೇಬಾತಿ ಗುಡ್ಡದ ಕ್ಯಾಂಪ್, ದೊಡ್ಡಬಾತಿ ಪೋ: ದಾವಣಗೆರೆ ತಾಲ್ಲೂಕು (ಪ.ಜಾತಿ) | ಸದಸ್ಯರು |
| 8 | ಶ್ರೀ ಮಂಜಪ್ಪ ಬಿನ್ ಮಸಿಯಪ್ಪ, ಕಡ್ಲೇಬಾಳು, ದಾವಣಗೆರೆ ತಾ: ಜಿಲ್ಲೆ (ಪ. ಪಂಗಡ) | ಸದಸ್ಯರು |

ಆ ಹಿನ್ನೆಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 27 ಮುಸರ 2012; ಬೆಂಗಳೂರು, ದಿನಾಂಕ: 06ನೇ ಮಾರ್ಚ್ 2012**

ದಾವಣಗೆರೆ ಜಿಲ್ಲೆಯ ದಾವಣಗೆರೆ ಉತ್ತರ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಮುಸರ 2008 ದಿನಾಂಕ: 14-10-2008ನ್ನು ಭಾಗಶಃ ಮಾರ್ಪಡಿಸಿ, ಅಧಿಕಾರೇತರ ಸದಸ್ಯರ ನೇಮಕಾತಿ ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಒಡೆಯರ್ ಹನುಮಂತಪ್ಪ ಬಿನ್ ನಾಗೇಂದ್ರಪ್ಪ, ಜಯನಗರ ಮುಖ್ಯರಸ್ತೆ, ಯಲ್ಲಮ್ಮದೇವಸ್ಥಾನ ಪಕ್ಕ, ನಿಟ್ಟುವಳ್ಳಿ, ದಾವಣಗೆರೆ | ಸಾಮಾನ್ಯ |
| 2 | ಶ್ರೀಮತಿ ಶೋಭಾ ಕೋಂ ಬಸವರಾಜಪ್ಪ, ಐ.ಟಿ.ಐ. ಹಿಂಭಾಗ, ಬಸವೇಶ್ವರ ಶಾಲೆ, ದಾವಣಗೆರೆ. | ಮಹಿಳೆ |
| 3 | ಶ್ರೀ ಪೂಜಾರ್ ನಾಗೇಂದ್ರಪ್ಪ ಬಿನ್ ಮರಿಯಪ್ಪ, ಬೇತೂರು, ದಾವಣಗೆರೆ. | ಪರಿಶಿಷ್ಟ ಜಾತಿ |
| 4 | ಶ್ರೀ ದುರ್ಗೇಶ್ ಬಿನ್ ಹಾಲಿವಾಳ ಭೀಮಪ್ಪ, ದುರ್ಗಮ್ಮನ ದೇವಸ್ಥಾನದ ಹಿಂಭಾಗ, ದಾವಣಗೆರೆ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 837

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ.

ಕಂದಾಯ ಇಲಾಖೆ. (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆಯ ದಾವಣಗೆರೆ ದಕ್ಷಿಣ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ: ಕಂಇ 66 ಮುಸರ 2008,
ದಿನಾಂಕ: 20–02–2009,

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ದಾವಣಗೆರೆ ಜಿಲ್ಲೆಯ ದಾವಣಗೆರೆ ದಕ್ಷಿಣ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ದಾವಣಗೆರೆ ದಕ್ಷಿಣ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಡಾ: ಎ.ಹೆಚ್. ಶಿವಯೋಗಿಸ್ವಾಮಿ, ಕರ್ನಾಟಕ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 3 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ದಾವಣಗೆರೆ ಜಿಲ್ಲೆ | ಸದಸ್ಯರು |
| 4 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ದಾವಣಗೆರೆ ಜಿಲ್ಲೆ | |
| 5 | ತಹಶೀಲ್ದಾರ್, ದಾವಣಗೆರೆ ತಾಲ್ಲೂಕು | ಸದಸ್ಯ ಕಾರ್ಯದರ್ಶಿ |
| 6 | ಶ್ರೀ ಮಲ್ಲಿಕಾರ್ಜುನ ಟಿ. ಹೆಚ್. ಬಿನ್ ಹನುಮಂತಪ್ಪ, ಕನಗೊಂಡನ ಹಳ್ಳಿ, ದಾವಣಗೆರೆ (ಸಾಮಾನ್ಯ) | ಸದಸ್ಯರು |
| 7 | ಶ್ರೀಮತಿ ಲೀಲಾವತಿ ದಾವಲ್‌ಪೇಟೆ, ಹೊಂಡದ ಸರ್ಕಲ್ ದಾವಣಗೆರೆ (ಮಹಿಳೆ) | ಸದಸ್ಯರು |
| 8 | ಶ್ರೀ ಎ.ಕೆ. ಹನುಮಂತಪ್ಪ s/o ಹಳದಪ್ಪ, ಶಿರಮಗೊಂಡನಹಳ್ಳಿ (ಪ. ಜಾತಿ) | ಸದಸ್ಯರು |
| 9 | ಶ್ರೀ ಶಿವು ತರಕಾರಿ ಬಿನ್ ಪರಸಪ್ಪ, ನಂ.133/1, 2ನೇ ಕ್ರಾಸ್, ಬಸವರಾಜಪೇಟೆ, ದಾವಣಗರೆ (ಪ.ಪಂಗಡ) | ಸದಸ್ಯರು |

ಆ ಹಿನ್ನೆಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 26 ಮುಸರ 2012; ಬೆಂಗಳೂರು, ದಿನಾಂಕ: 06ನೇ ಮಾರ್ಚ್ 2012**

ದಾವಣಗೆರೆ ಜಿಲ್ಲೆಯ ದಾವಣಗೆರೆ ದಕ್ಷಿಣ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ: ಕಂಇ 66 ಮುಸರ 2008 ದಿನಾಂಕ: 20–02–2009ನ್ನು ಭಾಗಶಃ ಮಾರ್ಪಡಿಸಿ, ಅಧಿಕಾರೇತರ ಸದಸ್ಯರ ನೇಮಕಾತಿ ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ದೇಸಾಯಿ ಮಲ್ಲಣ್ಣ ಬಿನ್ ದೇಸಾಯಿ ಶರಣಪ್ಪ, # 121/1, ಬಸವರಾಜಪೇಟೆ ದಾವಣಗೆರೆ. | ಸಾಮಾನ್ಯ |
| 2 | ಶ್ರೀಮತಿ ರೇಣುಕಮ್ಮ ಕೋಂ ಬಸವರಾಜಪ್ಪ ಬಣಕಾರ್, ಕಾರ್ಲ್ ಮಾರ್ಕ್ಸ್ ನಗರ, 1ನೇ ಕ್ರಾಸ್, ಬಂಕಾಪುರ, ನಂಜುಂಡಪ್ಪ ಸ್ಕೂಲ್ ಹಿಂಭಾಗ, ಬೇತೂರು ರಸ್ತೆ, ದಾವಣಗೆರೆ | ಮಹಿಳೆ |
| 3 | ಶ್ರೀ ನಾರಾಯಣ ಬಿನ್ ಚೌಡಪ್ಪ, ಅಜಾದ್‌ನಗರ, 15ನೇ ಕ್ರಾಸ್ ದಾವಣಗೆರೆ | ಪರಿಶಿಷ್ಟ ಜಾತಿ |
| 4 | ಶ್ರೀ ಬಿ. ಸೋಮಶೇಖರ್ ಬಿನ್ ಭೀಮಣ್ಣ. ಮಲ್ಲಿಕಾರ್ಜುನ ಕಲ್ಯಾಣಮಂಟಪದ ಹತ್ತಿರ, ಬಂಬೂ ಬಜಾರ್, ದಾವಣಗೆರೆ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 838

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ.

ಕಂದಾಯ ಇಲಾಖೆ. (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕೊಂಡಜ್ಜಿ ಗ್ರಾಮದ ಸ.ನಂ. 178ರಲ್ಲಿ 80–00 ಎಕರೆ ಜಮೀನನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರಿಗೆ ಗುತ್ತಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 81 ಎಲ್‌ಜಿಸಿ 71, ದಿನಾಂಕ: 24–12–1971.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 73 ಎಲ್‌ಜಿಸಿ 72, ದಿನಾಂಕ: 24–12–1972.
3. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 110 ಎಲ್‌ಜಿಸಿ 80, ದಿನಾಂಕ: 03–12–1982.
4. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 40 ಎಲ್‌ಜಿಸಿ 89, ದಿನಾಂಕ: 19–09–1989.
5. ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ 83 ಎಲ್‌ಜಿಸಿ 2001, ದಿನಾಂಕ: 25–11–2004.
6. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/129/10–11, ದಿನಾಂಕ: 04–11–2011 ಮತ್ತು ದಿನಾಂಕ: 15–04–2011.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಆದೇಶದಲ್ಲಿ ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕೊಂಡಜ್ಜಿ ಗ್ರಾಮದ ಸ.ನಂ. 178ರಲ್ಲಿ 80–00 ಎಕರೆ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರಿಗೆ ದಿನಾಂಕ: 21–11–2001 ರಿಂದ 23–12–2011ರ ವರೆಗೆ 10 ವರ್ಷಗಳ ಅವಧಿಗೆ ಮಂಜೂರು ಮಾಡಿ ಆದೇಶ ಮಾಡಲಾಗಿರುತ್ತದೆ. ಮೇಲೆ ಓದಲಾದ (2) ರಿಂದ (5)ರ ವರೆಗೆ ಸದರಿ ಗುತ್ತಿಗೆ ಅವಧಿಯನ್ನು ಕಾಲಕಾಲಕ್ಕೆ ಮುಂದುವರಿಸಿಕೊಂಡು ಬಂದಿದ್ದು ದಿನಾಂಕ: 23–12–2011 ರಂದು ಪೂರ್ಣಗೊಂಡಿರುತ್ತದೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರು ಮೇಲೆ ಓದಲಾದ (6)ರ ದಿನಾಂಕ: 04–11–2011ರ ಪತ್ರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ನವರು ಸದರಿ ಜಮೀನಿನಲ್ಲಿ ಹಾಲಿ ಸ್ಕೌಟ್ಸ್ ಕ್ಯಾಂಪ್ ನಡೆಸಲು ಅಗತ್ಯ ಮೂಲಭೂತ ಸೌಕರ್ಯಗಳೊಂದಿಗೆ ಉತ್ತಮವಾಗಿ ಅಭಿವೃದ್ಧಿಪಡಿಸಿರುವುದಾಗಿಯು ಮತ್ತು ಪಕ್ಕದಲ್ಲಿಯೇ ಕೊಂಡಜ್ಜಿ ಕೆರೆ ಇದ್ದು ಸಾಕಷ್ಟು ಗಿಡಮರಗಳನ್ನು ಬೆಳಸಿ ಜಮೀನನ್ನು ಆಕರ್ಷಣೀಯವಾಗಿ ಮಾಡಿದ್ದು ಜಿಲ್ಲೆಯ ಬಹುತೇಕ ಶಾಲಾ ಕಾಲೇಜಿನವರು ಸದರಿ ಸ್ಥಳದಲ್ಲಿ ಎನ್.ಸಿ.ಸಿ. ಮತ್ತು ಸ್ಕೌಟ್ಸ್ ಕ್ಯಾಂಪುಗಳನ್ನು ನಡೆಸುತ್ತಿದ್ದು ರಾಜ್ಯ ಮಟ್ಟದ ಶಿಬಿರಗಳು ನಡೆಯುತ್ತಿರುತ್ತವೆ. ಪ್ರಸ್ತಾವಿತ ಜಮೀನನ್ನು ಸ್ಕೌಟ್ಸ್ ಮತ್ತು ಗೈಡ್ಸ್‌ನವರಿಗೆ ಗುತ್ತಿಗೆ ಮುಂದುವರಿಸುವ ಬಗ್ಗೆ ಗ್ರಾಮಸ್ಥರ ತಕರಾರು ಇರುವುದಿಲ್ಲ. ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಸರ್ಕಾರದ ಅನುದಾನದಿಂದ ನಡೆಯುವ ಸ್ವಯಂ ಸಂಸ್ಥೆಯಾಗಿರುತ್ತದೆ. ಆದ್ದರಿಂದ ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕೊಂಡಜ್ಜಿ ಗ್ರಾಮದ ಸ.ನಂ. 178ರ 80–00 ಎಕರೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(3)(6) ರಡಿಯಲ್ಲಿ ಗುತ್ತಿಗೆ ದರ ಎಕರೆ ಒಂದಕ್ಕೆ ವಾರ್ಷಿಕ ರೂ. 1000–00 ರಂತೆ ಗುತ್ತಿಗೆ ದರ ನಿಗಧಿಪಡಿಸಿ 30 ವರ್ಷಕ್ಕೆ ಗುತ್ತಿಗೆ ಮುಂದುವರಿಸಲು ಕೋರಿರುತ್ತಾರೆ.

ಪ್ರಾದೇಶಿ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 91 ಎಲ್‌ಜಿಸಿ 2010, ಬೆಂಗಳೂರು, ದಿನಾಂಕ : 22ನೇ ಫೆಬ್ರವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕೊಂಡಜ್ಜಿ ಗ್ರಾಮದ ಸ.ನಂ. 178ರಲ್ಲಿ 80–00 ಎಕರೆ ಜಮೀನನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(3)(6) ರಡಿಯಲ್ಲಿ ಗುತ್ತಿಗೆ ದರ ಎಕರೆ ಒಂದಕ್ಕೆ ವಾರ್ಷಿಕ ರೂ. 1000–00 ರಂತೆ ನಿಗಧಿಪಡಿಸಿ ದಿನಾಂಕ: 23–12–2011 ರಿಂದ 10 ವರ್ಷಗಳ ಅವಧಿಗೆ ಮುಂದುವರಿಸಲು ಮೇಲ್ಕಂಡ ಆದೇಶದಲ್ಲಿ ವಿಧಿಸಿದ ಷರತ್ತಿಗೊಳಪಟ್ಟು ಸರ್ಕಾರದ ಅನುಮತಿ ನೀಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1052/ವೆಚ್ಚ–7/2011 ದಿನಾಂಕ: 13–12–2011ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 839

ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಕಂದಾಯ ಸಚಿವಾಲಯ

**ವಿಷಯ :** ಮುಧೋಳ್ ಬೇಟೆ ನಾಯಿ ತಳಿ ಕೇಂದ್ರ ಸ್ಥಾಪಿಸಲು ಮುಧೋಳ್ ತಾಲ್ಲೂಕು, ತಿಮ್ಮಾಪುರ ಗ್ರಾಮದ ರಿ.ಸ.ನಂ. 22/2 ರಲ್ಲಿನ 10-00 ಎಕರೆ ಜಮೀನನ್ನು ಕಾಯ್ದಿರಿಸಿ ಪಶುಪಾಲನಾ ಮತ್ತು ಪಶು ವೈದ್ಯ ಸೇವೆ ಇಲಾಖೆ ಬಾಗಲಕೋಟೆ ಇವರಿಗೆ ವರ್ಗಾಯಿಸಿರುವುದನ್ನು ಹಿಂದಕ್ಕೆ ಪಡೆದು ಕುಲಸಚಿವರು ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರಿಗೆ ವರ್ಗಾಯಿಸುವ ಕುರಿತು.

**ಓದಲಾಗಿದೆ :** ಜಿಲ್ಲಾಧಿಕಾರಿ, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ರವರ ಪತ್ರ ಸಂಖ್ಯೆ: ಆರ್‌ಬಿ/ಎಲ್‌ಎನ್‌ಡಿ/ಎಂ/ಸಿಆರ್-106/2002-03 ದಿನಾಂಕ: 13-01-2010 ಮತ್ತು ದಿನಾಂಕ: 15-07-2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬಾಗಲಕೋಟೆ ಜಿಲ್ಲೆ, ಮುಧೋಳ್ ತಾಲ್ಲೂಕು, ತಿಮ್ಮಾಪುರ ಗ್ರಾಮದ ರಿ.ಸ.ನಂ. 22/2ರಲ್ಲಿ 10-00 ಎಕರೆ ಜಮೀನನ್ನು, ಮುಧೋಳ್ ಬೇಟೆ ನಾಯಿ ತಳಿ ಸಂವರ್ಧನಾ ಕೇಂದ್ರ ಸ್ಥಾಪಿಸುವ ಉದ್ದೇಶಕ್ಕಾಗಿ ಪಶುಪಾಲನೆ ಮತ್ತು ಪಶು ವೈದ್ಯ ಇಲಾಖೆಗೆ ಕಾಯ್ದಿರಿಸಿರುವುದನ್ನು ಹಿಂದಕ್ಕೆ ಪಡೆದು ಸದರಿ ಜಮೀನನ್ನು ಕುಲಸಚಿವರು ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಬೀದರ್ ಇವರಿಗೆ ವರ್ಗಾಯಿಸಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ.

ಬಾಗಲಕೋಟೆ ಜಿಲ್ಲೆ, ಮುಧೋಳ್ ತಾಲ್ಲೂಕು, ತಿಮ್ಮಾಪುರ ಗ್ರಾಮದ ರಿ.ಸ.ನಂ. 22/2ರಲ್ಲಿ 10-00 ಎಕರೆ ಸರ್ಕಾರಿ ಜಮೀನನ್ನು ಮುಧೋಳ್ ಬೇಟೆ ನಾಯಿ ತಳಿ ಸಂವರ್ಧನಾ ಕೇಂದ್ರ ಸ್ಥಾಪಿಸುವುದಕ್ಕಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಿ ಪಶುಪಾಲನಾ ಮತ್ತು ಪಶು ವೈದ್ಯ ಇಲಾಖೆಗೆ ವರ್ಗಾಯಿಸಲು ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ:57:ಎಲ್‌ಜಿಜೆ:2003 ದಿನಾಂಕ: 11-06-2007ರಲ್ಲಿ ಸರ್ಕಾರದ ಅನುಮತಿ ನೀಡಲಾಗಿತ್ತು. ಅದರಂತೆ ಜಿಲ್ಲಾಧಿಕಾರಿಗಳು, ಬಾಗಲಕೋಟೆ ರವರು ದಿನಾಂಕ: 04-07-2007ರ ಆದೇಶದಲ್ಲಿ ಸದರಿ 10-00 ಎಕರೆ ಜಮೀನನ್ನು ಕೆಲವು ಷರತ್ತುಗಳಿಗೊಳಪಟ್ಟು ಉಪ ನಿರ್ದೇಶಕರು ಪಶುಪಾಲನೆ ಮತ್ತು ಪಶುವೈದ್ಯ ಸೇವೆ ಇಲಾಖೆ ಬಾಗಲಕೋಟೆ ಇವರಿಗೆ ಕಾಯ್ದಿರಿಸಿ ಆದೇಶಿಸಿರುತ್ತಾರೆ.

ಕರ್ನಾಟಕ ಪಶು ವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯದಲ್ಲಿ ಪ್ರಾರಂಭಿಸಲಾಗಿರುವ ಶ್ವಾನ ಸಂಶೋಧನೆ ಹಾಗೂ ಮಾಹಿತಿ ಕೇಂದ್ರ ಕೇವಲ ಮುಧೋಳ ಬೇಟೆ ನಾಯಿ ತಳಿ ಅಭಿವೃದ್ಧಿಗೆ ಮಾತ್ರ ಸೀಮಿತವಾಗಿರದೇ ರೈತರ ಪರ ಹೈನುಗಾರಿಕೆ, ಕುಕ್ಕುಟ ಪಾಲನೆ ಹಾಗೂ ಒಳನಾಡು ಮೀನುಗಾರಿಕೆ ಚಟುವಟಿಕೆಗಳ ಕುರಿತಾದ ಸಂಶೋಧನೆ ವಿಸ್ತರಣೆ ಹಾಗೂ ರೈತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದಕ್ಕಾಗಿ ಪ್ರಸ್ತಾಪಿತ 10-00 ಎಕರೆ ಜಮೀನನ್ನು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರಿಗೆ ಮಂಜೂರು ಮಾಡಬೇಕೆಂಬುದು ವಿಶ್ವವಿದ್ಯಾನಿಲಯದ ಕುಲಪತಿಗಳ ಕೋರಿಕೆಯಾಗಿರುತ್ತದೆ. ಸದರಿ 10-00 ಎಕರೆ ಜಮೀನನ್ನು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್ ಇವರಿಗೆ ಹಸ್ತಾಂತರಿಸುವುದಕ್ಕೆ ಆಕ್ಷೇಪಣೆ ಇರುವುದಿಲ್ಲ ಎಂಬುದಾಗಿ ಪಶು ಸಂಗೋಪನೆ ಹಾಗೂ ಮೀನುಗಾರಿಕೆ ಇಲಾಖೆ ರವರು ಸಹಮತಿ ನೀಡಿರುತ್ತಾರೆ. ಪ್ರಸ್ತಾಪಿತ ಜಮೀನಿನ ಮಾರುಕಟ್ಟೆ ದರವು ಎಕರೆಗೆ ರೂ. 1,20,000/- ಗಳು ಇರುವುದಾಗಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರು ವರದಿಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 22 ಎಲ್‌ಜಿಜೆ 2010 ಬೆಂಗಳೂರು, ದಿನಾಂಕ : 21ನೇ ಫೆಬ್ರವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಮುಧೋಳ್ ತಾಲ್ಲೂಕು, ತಿಮ್ಮಾಪುರ ಗ್ರಾಮದ ಸ.ನಂ. 22/2ರಲ್ಲಿ 10-00 ಎಕರೆ ಸರ್ಕಾರಿ ಜಮೀನನ್ನು ಮುಧೋಳ್ ಬೇಟೆ ನಾಯಿ ತಳಿ ಸಂವರ್ಧನಾ ಕೇಂದ್ರ ಸ್ಥಾಪಿಸಲು ಪಶುಪಾಲನೆ ಮತ್ತು ಪಶುವೈದ್ಯ ಇಲಾಖೆಗೆ ಕಾಯ್ದಿರಿಸಿ ಮಂಜೂರು ಮಾಡಲು ಸರ್ಕಾರದ ಪತ್ರ ಸಂಖ್ಯೆ: ಆರ್‌ಡಿ/57/ಎಲ್‌ಜಿಜೆ/2003 ದಿನಾಂಕ: 11-06-2007ರ ಪತ್ರದಲ್ಲಿ ಸರ್ಕಾರದ ಅನುಮತಿ ನೀಡಲಾಗಿರುವುದನ್ನು ಹಿಂದಕ್ಕೆ ಪಡೆಯಲಾಗಿದೆ ಹಾಗೂ ಸದರಿ 10-00 ಎಕರೆ ಜಮೀನನ್ನು ಕರ್ನಾಟಕ ಪಶುವೈದ್ಯಕೀಯ ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ)ರನ್ವಯ ಸದರಿ 10-00 ಎಕರೆ ಜಮೀನಿನ ಪ್ರಚಲಿತ ಮಾರುಕಟ್ಟೆ ದರದ ಶೇ.50ರಷ್ಟು ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ; ಆಇ/517/ವೆಚ್ಚ-7/2010 ದಿನಾಂಕ: 05-08-2010 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜೆ. ಲಕ್ಷ್ಮೀನಾರಾಯಣ**

ಪಿ.ಆರ್. 840

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ-3)

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕಣಿಮಿಣಿಕೆ ಗ್ರಾಮದ ಸ.ನಂ. 41ರಲ್ಲಿ ಮಾತಾ ಅಮೃತಾನಂದಮಯಿ ಅವರ ಪ್ರತಿಷ್ಠಾನದಿಂದ ಉನ್ನತ ದರ್ಜೆಯ ಆಸ್ಪತ್ರೆ ಸ್ಥಾಪಿಸಲು ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಪತ್ರ ಸಂಖ್ಯೆ:ಎಲ್.ಎನ್.ಡಿ. (ಎಸ್)ಸಿ.ಆರ್. 257/2009-10 ದಿನಾಂಕ: 23-02-2011 ಮತ್ತು 06-04-2011,

2. ಮಾತಾ ಅಮೃತಾನಂದಮಯಿ ಮಠ ರವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 25-11-2011ರ ಮನವಿ ಪತ್ರ.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿನ ವಿಶೇಷ ಜಿಲ್ಲಾಧಿಕಾರಿಗಳ ವರದಿಯಲ್ಲಿ ಕೆಂಗೇರಿ ಹೋಬಳಿ, ಕಣಿಮಿಣಿಕೆ ಗ್ರಾಮವು ಮೂಲತಃ ಜೋಡಿ ಗ್ರಾಮವಾಗಿದ್ದು, ಈ ಗ್ರಾಮದ ಸ.ನಂ. 41ರ ಜಮೀನು ಸರ್ಕಾರಿ ಗೋಮಾಳವಾಗಿರುತ್ತದೆ. ಈ ಸ.ನಂ. 41ರಲ್ಲಿ ಒಟ್ಟು 154.24 ಎಕರೆ ಜಮೀನಿದ್ದು, ಈ ಪೈಕಿ 78.22 ಎಕರೆ ಜಮೀನು ಈಗಾಗಲೇ ನಮೂನೆ VIII ರಂತೆ ದರಖಾಸ್ತು ಮೂಲಕ ವಿಲೇಯಾಗಿದ್ದು, ಉಳಿಕೆ 76.02 ಎಕರೆ ವಿಸ್ತೀರ್ಣದ ಜಮೀನಿದ್ದು, ಈ ಜಮೀನು ಒತ್ತುವರಿ ಹಾಗೂ ಅದಲು ಬದಲಿಂದ ಕೂಡಿದ್ದು, ಈ ಪೈಕಿ ಈಗಾಗಲೇ 25.00 ಎಕರೆ ಪ್ರದೇಶವನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರಿಯಾಗಿ ಹಸ್ತಾಂತರವಾಗಿದ್ದು, ಈ ಜಮೀನಿನ ಬಗ್ಗೆ ಕ್ರೈಸ್ಟ್ ಕಾಲೇಜು ಮತ್ತು ಬಿಎಂಟಿಸಿ ರವರಿಗೆ ನೀಡುವ ಕುರಿತು ನ್ಯಾಯಾಲಯದಲ್ಲಿ ಪ್ರಕರಣ ದಾಖಲಾಗಿ ತಕರಾರು ಬಾಕಿ ಇರುತ್ತದೆ. ಕಣಿಮಿಣಿಕೆ ಗ್ರಾಮದ ಸ.ನಂ. 41ರಲ್ಲಿ ಒತ್ತುವರಿಯಲ್ಲಿದ್ದ ಶ್ರೀ ಶಿವಣ್ಣ ಬಿನ್ ರಾಮಯ್ಯ ರವರು 13.04 ಎಕರೆ ಪ್ರದೇಶವನ್ನು ದಿನಾಂಕ: 03-03-2007 ರಂದು ಸರ್ಕಾರದ ವಶಕ್ಕೆ ಬಿಟ್ಟುಕೊಟ್ಟಿದ್ದು ಈ ಪ್ರದೇಶವು ಸೇರಿ ಸುಮಾರು 25.00 ಎಕರೆ ಪ್ರದೇಶ ಖಾಲಿ ಇರುತ್ತದೆ ಎಂಬುದಾಗಿ ವರದಿ ಮಾಡಿದ್ದಾರೆ.

ಮಾತಾ ಅಮೃತಾನಂದಮಯಿ ಸೇವಾ ಟ್ರಸ್ಟ್ ರವರಿಗೆ ಉನ್ನತ ದರ್ಜೆಯ ಆಸ್ಪತ್ರೆ ಕಟ್ಟಡ ಸ್ಥಾಪಿಸುವುದಕ್ಕಾಗಿ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಕಣಿಮಿಣಿಕೆ ಗ್ರಾಮದ ಸ.ನಂ. 41ರ ಜಮೀನು ಆರ್.ಟಿ.ಸಿ.ಯ ಕಾಲಂ 9ರಲ್ಲಿ **ಸರ್ಕಾರಿ ಗೋಮಾಳ** ಎಂಬುದಾಗಿ ವರ್ಗೀಕೃತಗೊಂಡಿದ್ದು, 129.24 ಎಕರೆ ಇರುತ್ತದೆ. ಈ ಜಮೀನಿನ ಪೈಕಿ 25 ಎಕರೆ ಜಮೀನನ್ನು ಮಂಜೂರು ಮಾಡಬೇಕೆಂಬುದು ಸಂಸ್ಥೆಯವರ ಕೋರಿಕೆಯಾಗಿದ್ದು, ಸದರಿ 25 ಎಕರೆ ಜಮೀನನ್ನು ಈ ಕೆಳಕಂಡಂತೆ ಉಪಯೋಗಿಸಿಕೊಳ್ಳಲು ಮಾಹಿತಿ ನೀಡಿರುತ್ತಾರೆ.

**ಬಿಡಿಎ ನಿಯಮಾವಳಿ ಪ್ರಕಾರ:**

1. ಅನುಮತಿಸಲಾದ ಜಮೀನು = 45%
   ಆದ್ದರಿಂದ ಅಭಿವೃದ್ಧಿಗಾಗಿ ದೊರೆಯಬಹುದಾದ ಜಾಗದ ವಿಸ್ತೀರ್ಣ 25 ಎಕರೆಯ 45% ಎಂದರೆ 11.25 ಎಕರೆ ಮಾತ್ರ.
2. ಅನುಮತಿಸಲ್ಪಡುವ ಎಫ್.ಎ.ಆರ್. 2. 25 ಆಸ್ಪತ್ರೆ ಮತ್ತು ಶಿಕ್ಷಣ ಸಂಸ್ಥೆಗಳ ಗರಿಷ್ಠ ಎತ್ತರ = ನೆಲ ಅಂತಸ್ತು + 7 ಮಹಡಿಗಳು.
   ಕನಿಷ್ಠ 100 ವಿದ್ಯಾರ್ಥಿಗಳನ್ನು ಮೆಡಿಕಲ್ ಕಾಲೇಜಿಗೆ ಸೇರ್ಪಡೆ ಮಾಡಿಕೊಳ್ಳಲು ಎಂಸಿಇ ನಿಯಮಾವಳಿ ಪ್ರಕಾರ 500 ಹಾಸಿಗೆಯುಳ್ಳ ಆಸ್ಪತ್ರೆಯ ಅಗತ್ಯವಿದೆ.

**ಆದ್ದರಿಂದ ಸಂಸ್ಥೆಗೆ ಅಗತ್ಯವಾದ ಜಮೀನಿನ ವಿವರ ಹೀಗಿದೆ:**

1. 100 ವಿದ್ಯಾರ್ಥಿಗಳನ್ನು ದಾಖಲಾತಿ ಮಾಡಿಕೊಳ್ಳಲು ಅಗತ್ಯವಾದ ಒಟ್ಟು ಜಾಗ 2.5 ಲಕ್ಷ ಚ. ಅಡಿಗಳ – 3 ಎಕರೆಗಳು.
2. 400 ಹಾಸಿಗೆಗಳಿರುವ ಶಿಕ್ಷಣದ ಸಹಿತ ಆಸ್ಪತ್ರೆಯ ಒಟ್ಟು ಜಾಗಿ 4.0 ಲಕ್ಷ ಚ. ಅಡಿ – 4 ಎಕರೆಗಳು.
3. ಎಲ್ಲಾ ಸ್ನಾತಕೋತ್ತರ ಪರಿಣಿತಿಗೆ ಅಗತ್ಯವಾದ ಸೂಪರ್ ಸ್ಪೆಷಾಲಿಟಿ ವಿಭಾಗಕ್ಕೆ ಬೇಕಾದ ಒಟ್ಟು ಜಾಗ 2.5 ಲಕ್ಷ ಚ. ಅಡಿಗಳು –3 ಎಕರೆಗಳು.
4. ನರ್ಸಿಂಗ್ ಕಾಲೇಜಿಗೆ ಬೇಕಾದ (ಬಿಎಸ್ಸಿ, ಡಿಪ್ಲೋಮಾ, ಮಿಡ್ವೈಫರಿ ಮತ್ತು ಸರ್ಟಿಫಿಕೇಟು) ತರಗತಿಗಳಿಗಾಗಿ ಜಾಗ 80,000 ಚ. ಅಡಿ –2 ಎಕರೆಗಳು.
5. ವಿದ್ಯಾರ್ಥಿ/ವಿದ್ಯಾರ್ಥಿನಿಯರಿಗಾಗಿ ಹಾಸ್ಟೆಲ್, ಇಂಜಿನಿಯರ್‌ಗಳಿಗೆ ವಸತಿ, ನರ್ಸುಗಳಿಗೆ ಕ್ವಾರ್ಟರ್ಸ್, ಸಿಬ್ಬಂದಿ ವರ್ಗಕ್ಕೆ ಕ್ವಾರ್ಟಸ್, ಬೇಕಾದ ಒಟ್ಟಾರೆ ಜಾಗ 4 ಲಕ್ಷ ಚ. ಅಡಿ –5 ಎಕರೆಗಳು.
6. ಕೇಂದ್ರ ವರ್ಕ್ ಷಾಪ್, ಲಾಂಡ್ರಿ, ಪ್ಲಾಂಟ್ ರೂಮುಗಳು, ತ್ಯಾಜ್ಯ ವಸ್ತು ವಿಲೇವಾರಿ, ಇನ್ಸಿನೆರೇಷನ್ ಪ್ಲಾಂಟ್, ನೀರು ಸಂಸ್ಕರಿಸುವ ಕಾರ್ಖಾನೆ, ಕೇಂದ್ರ ಉಗ್ರಾಣಕ್ಕಾಗಿ 2 ಎಕರೆಗಳು.
7. ಆಟದ ಮೈದಾನ, ಜಿಮ್ನಾಸಿಯಂ, ಮನರಂಜನಾ ಸೌಲಭ್ಯಗಳು, ಕ್ರೀಷ್, ಕೇಂದ್ರ ಸಭಾಂಗಣಕ್ಕಾಗಿ 2 ಎಕರೆಗಳು.
8. ಟರ್ಮಿನಲ್ ಕ್ಯಾನ್ಸರ್ ರೋಗಿಗಳಿಗೆ ಮತ್ತು ಟರ್ಮಿನಲ್ ಏಡ್ಸ್, ಎಚ್ ಐ ವಿ ರೋಗಿಗಳಿಗೆ ಶುಶ್ರೂಷಾ ಕೇಂದ್ರಗಳು, ಅಂಧರಿಗೆ, ಕಿವುಡು, ಮೂಕರಿಗೆ, ಹೆಳವರಿಗೆ ವಿಕಲಾಂಗರಿಗೆ ವೃದ್ಧರು ಮತ್ತು ರೋಗ ಪೀಡಿತರಿಗಾಗಿ ಶುಶ್ರೂಷಾ ಕೇಂದ್ರಗಳಿಗಾಗಿ ಒಟ್ಟು ಅಗತ್ಯ ಜಾಗ 2 ಲಕ್ಷ ಚ. ಅಡಿಗಳು – 3 ಎಕರೆಗಳು.
9. ಬಿಡಿಎ ನಿಯಮಾವಳಿಯಂತೆ ತೆರೆದ ಪಾರ್ಕಿಂಗ್ ಪ್ರದೇಶ
   ಕಾರು ಒಂದಕ್ಕೆ (2.5 ಮಿ. – 5.5 ಮಿ. = 132.75 ಚ. ಮೀ.) ನಿರ್ಮಿತ ಪ್ರತಿ 100 ಚ. ಮೀ.ಗೆ ಎಂದರೆ ಒಟ್ಟು ವಿಸ್ತೀರ್ಣ = 16 ಲಕ್ಷ ಚದರ ಅಡಿ.
   ಬೇಕಾದ ಕಾರು ಪಾರ್ಕಿಂಗ್ ಜಾಗ = 16 ಲಕ್ಷ ಚ. ಅಡಿ/10.76 = 14,900 ಚ. ಮಿ.
   ಒಟ್ಟಾರೆ ಕಾರು ಪಾರ್ಕಿಂಗ್ ಜಾಗ = 14.900/100 = 149 ಕಾರು ಪಾರ್ಕಿಂಗ್
   ಪ್ರತಿ ಕಾರಿಗೆ ಜಾಗ = 2.5ಮಿ. X 5.5 ಮೀ. = 13.75. ಚ. ಮೀ.
   ಕಾರು ಪಾರ್ಕಿಂಗ್ = 149 X 13.75 ಚ. ಮೀ = 2048 ಚ. ಮೀ + ಡ್ರೈವ್‌ವೇಗಳು – 1 ಎಕರೆ

**ಒಟ್ಟಾರೆ ಪೂರ್ತಾ ಕ್ಯಾಂಪಸಿಗೆ ಬೇಕಾದ ಜಮೀನಿನ ವಿಸ್ತಾರ = 25 ಎಕರೆ**

Medical Council of India, Establishment of Medical College Regulations 1999 ರನ್ವಯ ಮೆಡಿಕಲ್ ಕಾಲೇಜು ತೆರೆಯಲು ಒಂದೇ ಕಡೆ ಕನಿಷ್ಠ 25.00 ಎಕರೆ ಜಮೀನು ಇರಬೇಕಾಗುತ್ತದೆ. ಆದ್ದರಿಂದ ವೈದ್ಯಕೀಯ ಶಿಕ್ಷಣ ಕಾಲೇಜು ತೆರೆಯುವ ಉದ್ದೇಶಕ್ಕಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕಣಿಮಿಣಿಕೆ ಗ್ರಾಮದ ಸ.ನಂ. 41ರಲ್ಲಿ 25.00 ಎಕರೆ ಜಮೀನನ್ನು ಸೂಪರ್ ಸ್ಪೆಶಾಲಿಟಿ ಹಾಸ್ಪಿಟಲ್ ಮತ್ತು ಮೆಡಿಕಲ್ ಕಾಲೇಜು ತೆರೆಯುವ ಉದ್ದೇಶಕ್ಕಾಗಿ ಮಂಜೂರು ಮಾಡಬೇಕೆಂಬುದು ಮಾತಾ ಅಮೃತಾನಂದಮಯಿ ಸಂಸ್ಥೆಯವರ ಕೋರಿಕೆಯಾಗಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 176 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ : 06ನೇ ಮಾರ್ಚ್ 2012**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕಣಿಮಿಣಿಕೆ ಗ್ರಾಮದ ಸ.ನಂ. 41ರಲ್ಲಿನ 129 ಎಕರೆ 24 ಗುಂಟೆ ಸರ್ಕಾರಿ ಗೋಮಾಳ ಜಮೀನಿನ ಪೈಕಿ 25.00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4) ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಸದರಿ 25.00 ಎಕರೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 21 ರನ್ವಯ ಸದರಿ ಜಮೀನಿನ ಮಾರ್ಗಸೂಚಿ ಬೆಲೆಯ ಶೇಕಡ 30 ರಷ್ಟು ವಿಧಿಸಿ ಶ್ರೀ ಮಾತಾ ಅಮೃತಾನಂದಮಯಿ ಮಠ ರವರಿಗೆ ಉನ್ನತ ದರ್ಜೆ ಆಸ್ಪತ್ರೆ ಮತ್ತು ಮೆಡಿಕಲ್ ಕಾಲೇಜು ಸ್ಥಾಪಿಸುವ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸಿಕೊಳ್ಳತಕ್ಕದ್ದೆಂದು ಅದನ್ನು ಈ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕಾಗಿ ಜಮೀನು ಬಳಸಿಕೊಂಡರೆ ಮಂಜೂರಾತಿಯನ್ನು ರದ್ದುಪಡಿಸಲಾಗುವುದೆಂಬ ಷರತ್ತು ವಿಧಿಸಿ ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 1011/ವೆಚ್ಚ–7/2011, ದಿನಾಂಕ: 12–12–2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಕೆ. ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ.ಮಂ)

ಪಿ.ಆರ್. 841

## ಕಂದಾಯ ಸಚಿವಾಲಯ

**ವಿಷಯ :** ಚಿಂತಾಮಣಿ ತಾಲ್ಲೂಕು ಮಿನಿ ವಿಧಾನಸೌಧ ಎರಡನೇ ಹಂತದ ಕಟ್ಟಡ ನಿರ್ಮಾಣದ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ: ಎಡಿಎಂ:ಸಿಆರ್ 134/2011–12, ದಿನಾಂಕ: 23–01–2012.

**ಪ್ರಸ್ತಾವನೆ :**

ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕು ಕೇಂದ್ರದಲ್ಲಿ ಮಿನಿ ವಿಧಾನಸೌಧ, ನೆಲ ಮಾಳಿಗೆ, ಕಟ್ಟಡವಿದೆ. ಇದರಲ್ಲಿ ತಾಲ್ಲೂಕು ಕಛೇರಿ, ಉಪ ನೋಂದಣಿ ಕಛೇರಿ ಮತ್ತು ಉಪ ಖಜಾನೆ ಕಾರ್ಯನಿರ್ವಹಿಸುತ್ತಿದ್ದು, ಸ್ಥಳಾವಕಾಶದ ಕೊರತೆಯಿರುತ್ತದೆ.

ಚಿಕ್ಕಬಳ್ಳಾಪುರ ಜಿಲ್ಲಾಧಿಕಾರಿಯವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಚಿಂತಾಮಣಿ ತಾಲ್ಲೂಕು ಮಿನಿ ವಿಧಾಸೌಧ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿಗಳಿಗೆ ಸ್ಥಳಾವಕಾಶದ ಕೊರತೆಯನ್ನು ನೀಗಿಸಲು ಮಿನಿ ವಿಧಾನಸೌಧ ಕಟ್ಟಡದ ನೆಲ ಮಾಳಿಗೆಯ ಮೇಲೆ ಒಂದು ಮತ್ತು ಎರಡನೇ ಮಹಡಿ ಕಟ್ಟಡವನ್ನು ರೂ. 250.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣ ಮಾಡಲು ಸವಿವರ ಅಂದಾಜು ಪಟ್ಟಿ ಮತ್ತು ನಕ್ಷೆಯನ್ನು ಸಲ್ಲಿಸುತ್ತಾ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಕೂಲಕಂಷವಾಗಿ ಪರಿಶೀಲಿಸಿದ ನಂತರ ಚಿಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕು ಕೇಂದ್ರದಲ್ಲಿ ಮಿನಿ ವಿಧಾನಸೌಧ ಕಟ್ಟಡದ ಮೇಲೆ ಒಂದು ಮತ್ತು ಎರಡನೇ ಮಹಡಿಯ ಕಟ್ಟಡವನ್ನು ನಿರ್ಮಾಣ ಮಾಡುವ ರೂ. 250.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 100 ಡಬ್ಲ್ಯೂಬಿಆರ್ 2008 ಬೆಂಗಳೂರು, ದಿನಾಂಕ : 06ನೇ ಮಾರ್ಚ್ 2012**

ಚಿಂತಾಮಣಿ ತಾಲ್ಲೂಕು ಕೇಂದ್ರದಲ್ಲಿ ಮಿನಿ ವಿಧಾನಸೌಧ ಕಟ್ಟಡದ ಮೇಲೆ ಒಂದು ಮತ್ತು ಎರಡನೇ ಮಹಡಿಯ ಕಟ್ಟಡವನ್ನು ರೂ. 250.00 ಲಕ್ಷ (ರೂಪಾಯಿ ಇನ್ನೂರ ಐವತ್ತು ಲಕ್ಷಗಳು ಮಾತ್ರ) ಗಳ ಅಂದಾಜು ವೆಚ್ಚದಲ್ಲಿ ನಿರ್ಮಾಣ ಮಾಡಲು ಮಂಜೂರಾತಿಯನ್ನು ಮತ್ತು ಸವಿವರ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 4059–80–051–0–30–386 (ಯೋಜನೆ) ಲೆಕ್ಕಶೀರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು. ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮಗಳು 2000 ಪ್ರಕಾರ ನಿರ್ವಹಿಸತಕ್ಕದ್ದು.

ಸಕ್ಷಮ ಪ್ರಾಧಿಕಾರವು ಸದರಿ ಕಟ್ಟಡ ಕಾಮಗಾರಿಯ ಗುಣಮಟ್ಟ ಕಾಯ್ದುಕೊಳ್ಳುವಿಕೆಯನ್ನು ಕಾಲಕಾಲಕ್ಕೆ ಖಾತರಿಪಡಿಸಿಕೊಳ್ಳತಕ್ಕದ್ದು.

ಸರ್ಕಾರದ ಪೂರ್ವಾನುಮೋದನೆ ಇಲ್ಲದೆ ಹೆಚ್ಚುವರಿ ಕಾಮಗಾರಿಗಳನ್ನು ತೆಗೆದುಕೊಳ್ಳತಕ್ಕದ್ದಲ್ಲ.

ಕಾಮಗಾರಿಯನ್ನು ನಿಯಮಾನುಸಾರ ನಿಗದಿತ ಕಾಲಮಿತಿಯೊಳಗೆ ಪೂರ್ತಿಗೊಳಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿತ ಆರ್ಥಿಕ ಅಧಿಕಾರಗಳಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ)

ಪಿ.ಆರ್. 842

## ಇಂಧನ ಸಚಿವಾಲಯ

**ವಿಷಯ :** M/s Mytrah Energy (India) Limited ಇವರಿಗೆ 15.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/CEIL-15MW (Belgaum)/2011/865 ದಿನಾಂಕ: 24.01/11-02-2011.
2. ದಿನಾಂಕ: 27-05-2011 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/CEIL-15MW/2011/4681 ದಿನಾಂಕ: 17-12-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Caparo Energy (India) Limited ಇವರಿಗೆ ಬೆಳಗಾವಿ ಜಿಲ್ಲೆಯ ಕಟ್ಟಕ್‌ಬಾವಿ, ಮಂತೂರು, ನಿಪ್ಪನಾಳ್, ದೇವಪುರಹಟ್ಟಿ ಗ್ರಾಮಗಳಲ್ಲಿ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ದಿನಾಂಕ 27-05-2011ರಂದು ನಡೆದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Caparo Energy (India) Limited ಇವರಿಗೆ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತಾತ್ಕಾಲಿಕವಾಗಿಯಾದರೂ ಸರ್ವೆ ಸಂಖ್ಯೆಗಳನ್ನು ನೀಡುವ ಷರತ್ತಿಗೊಳಪಟ್ಟು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ.

ಅದರಂತೆ, ಅಭಿವೃದ್ಧಿದಾರರಿಂದ ಯೋಜನಾ ಸ್ಥಳದ ಸರ್ವೆ ಸಂಖ್ಯೆಗಳನ್ನು ಪಡೆದು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದೊಂದಿಗೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಹಾಗೂ ಈ ಯೋಜನೆಗೆ ಯಾವುದೇ ಸರ್ಕಾರಿ ಅಥವಾ ಅರಣ್ಯ ಜಮೀನಿನ ಅವಶ್ಯಕತೆಯಿರುವುದಿಲ್ಲ ಮತ್ತು ಈ ಯೋಜನೆಯಿಂದ ಉತ್ಪಾದನೆಯಾಗುವ ವಿದ್ಯುತ್ತನ್ನು ಎಸ್ಕಾಂಗೆ ಮಾರಾಟ ಮಾಡುವುದಾಗಿ ತಿಳಿಸಿರುತ್ತಾರೆ. ಅಲ್ಲದೇ, ಮೆ: ಕೆಪರೋ ಎನರ್ಜಿ ಇಂಡಿಯಾ ಲಿ.ಕಂಪನಿಯಿಂದ M/s Mytrah Energy (India) Limited ಕಂಪನಿಯ ಹೆಸರಿಗೆ ಬದಲಾವಣೆ ಮಾಡಿಕೊಂಡಿರುವುದಾಗಿ ದಿನಾಂಕ: 27-09-2011ರ ಪತ್ರದಲ್ಲಿ ತಿಳಿಸಿದ್ದು, ಅಭಿವೃದ್ಧಿದಾರರ ಕೋರಿಕೆಯಂತೆ ಹಂಚಿಕೆ ಆದೇಶವನ್ನು M/s Mytrah Energy (India) Limited ಕಂಪನಿ ಹೆಸರಿನಲ್ಲಿ ನೀಡಬಹುದಾಗಿದೆಯೆಂದು ತಿಳಿಸಿರುತ್ತಾರೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರದ ಆದೇಶ ಸಂಖ್ಯೆ : ಇಎನ್ 118 ಎನ್‌ಸಿಇ 2011 ಬೆಂಗಳೂರು, ದಿನಾಂಕ : 05ನೇ ಮಾರ್ಚ್ 2012**

M/s Mytrah Energy (India) Limited ಕಂಪನಿಗೆ ಬೆಳಗಾವಿ ಜಿಲ್ಲೆಯ ಕಟ್ಟಕ್‌ಬಾವಿ, ಮಂತೂರು, ನಿಪ್ಪನಾಳ್, ದೇವಪುರಹಟ್ಟಿ ಗ್ರಾಮಗಳಲ್ಲಿ 15.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:-

| Sl. No. | Topo Sheet No. | Proposed capacity in MW | Near by villages of the proposed area and district | Geographical area description of the project |
|---|---|---|---|---|
| 1 | 47 L/15 | 15 MW | Katakbavi, Mantur, Nipnal, Devapurahatti Belgaum distict | It is fround level plain, situataed on the east of chikkodi road cross, railway track and north of Nipnal, it is completely open type and has moderate elevation varying from 620 to 660 mtrs.<br>The area is held in the following Geographical co-ordinates:<br>Latitude : $16^0$20'0" - $16^0$23'3" N<br>Longitude : $74^0$47'0'' $74^0$52'20" E<br>Ridge peaks : 656, 617, 598, 619, m Amsl. |
| | | **15 MW** | | |

1. ಈ ಯೋಜನೆಯನ್ನು 3 ವರ್ಷದ ಅವಧಿಯೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06-01-2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನೆ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು, ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮ್‌ನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು. ಅಭಿವೃದ್ಧಿದಾರರು ಈ ಯೋಜನೆಯನ್ನು ಖಾಸಗಿ ಜಮೀನಿನಲ್ಲಿ ಕೈಗೊಳ್ಳುತ್ತಿರುವುದರಿಂದ, ಖಾಸಗಿ ಜಮೀನಿನ ಮಾಲೀಕರಿಂದ ಒಪ್ಪಿಗೆ ಪತ್ರವನ್ನು ಪಡೆಯತಕ್ಕದ್ದು.
7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ನೀತಿ ನಿಯಮಾನುಸಾರ ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
8. ಸರ್ಕಾರಿ ಆದೇಶ ಸಂಖ್ಯೆ: ಇಎನ್ 95 ಇಬಿಎಸ್ 2009 ದಿನಾಂಕ: 29–12–2009ರನ್ವಯ ವಿನಾಯಿತಿ ಸೌಲಭ್ಯಗಳು ಅನ್ವಯಿಸುವುದು.
9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವುದು.
10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.
11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. 843

## ಇಂಧನ ಸಚಿವಾಲಯ

**ವಿಷಯ :** ಮೆ: ಗಮೇಶ ವಿಂಡ್ ಟರ್‌ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 25.5 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 3.40 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಮಂಜುಶ್ರೀ ಟೆಕ್ನೋಪ್ಯಾಕ್ ಲಿಮಿಟೆಡ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇನ್ 254 ಎನ್‌ಸಿಇ 2010 ದಿನಾಂಕ: 19–04–2011.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/MTL-3.4MW-Gamesha/2012/610 ದಿನಾಂಕ: 22/24–02–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಗಮೇಶ ವಿಂಡ್ ಟರ್‌ಬೈನ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ, ಚಿಕ್ಕೋಡಿ ತಾಲ್ಲೂಕಿನ ಕರೋಶಿ ಗ್ರಾಮದ ಆಸುಪಾಸಿನಲ್ಲಿ 25.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವೊಂದು ನಿಬಂಧನೆಗೊಳಪಟ್ಟು ಹಂಚಿಕೆಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಗಮೇಶ ವಿಂಡ್ ಟರ್‌ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಮಂಜೂರಾಗಿರುವ 25.5 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 3.40 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಮಂಜುಶ್ರೀ ಟೆಕ್ನೋಪ್ಯಾಕ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಸದರಿ ಯೋಜನೆಯು ಖಾಸಗಿ ಜಮೀನಿನಲ್ಲಿ ಬರುತ್ತದೆ ಮತ್ತು ಈ ಯೋಜನೆಯನ್ನು ದಿನಾಂಕ: 31–03–2012ಕ್ಕೆ ಅನುಷ್ಠಾನಗೊಳಿಸಲಾಗುವುದೆಂದು ಸಹ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 109 ಎನ್‌ಸಿಇ 2012 ಬೆಂಗಳೂರು, ದಿನಾಂಕ : 05ನೇ ಮಾರ್ಚ್ 2012**

ಮೆ: ಗಮೇಶ ವಿಂಡ್ ಟರ್‌ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 25.5 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 3.40 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಮಂಜುಶ್ರೀ ಟೆಕ್ನೋಪ್ಯಾಕ್ ಲಿಮಿಟೆಡ್ ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ:–

**Schedule**

| Location and District | Description |
|---|---|
| Umarni Chikkodi Taluk Belgaum District | The proposed area is situated on the East & South-East of Chikkodi Town and as the reference wind monitoring station Chikkodi. It is a plain area and mostly has agricultural |

| | |
|---|---|
| | activities. Further, as per the topographic map, the area appears to be private and the general elevation of the area varies from 680 to 700 mtrs amsl.The proposed area encomphases the earlier sanctioned area and the same is deleted. The remaining area of the project is held in the following Geographical Co-ordinates:<br>**Latitude :** $16^0$21'56" - $16^0$25'38" N<br>**Longitude :** $74^0$35'0'' - $74^0$37'24" E<br>680 to 700, m Amsl<br>**Ridge Peaks**<br>**Special Note:** Excluding the area alloted to Private firm in the following Geographical Co-ordinates:<br>**Latitude :** $16^0$22'53" - $16^0$23'26" N<br>**Longitude :** $74^0$35'25'' - $74^0$37'6" E<br>**Ridge peaks :** 772m Amsl Toposheet : 47 L/11 |

**Land details of the project**

| Village Name | Taluk & District | MW | Land Sy. No. | No. of WTGs | Extent in land (Acres) | WTG Location No. |
|---|---|---|---|---|---|---|
| Umrani | Chikkodi/ Belgaum | 085 | 85/2 | 1 No. | 2 Acres | GKR-19 |
| | | 0.85 | 57/1 | 1 No. | 2 Acres | GKR-23 |
| | | 0.85 | 57/2 | 1 No. | 2 Acres | GKR-24 |
| | | 0.85 | 62/2A | 1 No. | 2 Acres | GKR-25 |

1. **ಮೆ: ಮಂಜುಶ್ರೀ ಟೆಕ್ನೋಪ್ಯಾಕ್ ಲಿಮಿಟೆಡ್** ರವರು ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ: 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಯೋಜನೆಯನ್ನು ದಿನಾಂಕ 31–03–2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು, ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter)
3. ಉತ್ಪಾದಿಸಿದ ವಿದ್ಯುತ್ತನ್ನು ಸ್ವಂತ ಬಳಕೆಗಾಗಿ (Captive Consumption) ಮತ್ತು ಮೂರನೇ ವ್ಯಕ್ತಿಗೆ ಮಾರಾಟಮಾಡಲು ಅನುಮತಿಸಿದೆ.
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲ್ಕಂಡ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 844

## ಇಂಧನ ಸಚಿವಾಲಯ

**ವಿಷಯ :** ಮೆ: ಗಮೇಶ ವಿಂಡ್ ಟರ್‌ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 25.5 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ 3.40 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗೋಲ್ಡನ್ ಹ್ಯಾಚರೀಸ್ ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇನ್ 254 ಎನ್‌ಸಿಇ 2010 ದಿನಾಂಕ: 19–04–2011.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: KRED/08/GH-3.4MW-Gamesha/2011/4512 ದಿನಾಂಕ: 30–11–2011/01-12–2011 ಮತ್ತು KRED/08/GH-3.4-Gamesha/2012/361 ದಿನಾಂಕ: 25–01–2012/03–02–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಗಮೇಶ ವಿಂಡ್ ಟರ್‌ಬೈನ್ಸ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾವಿ ಜಿಲ್ಲೆಯ, ಚಿಕ್ಕೋಡಿ ತಾಲ್ಲೂಕಿನ ಕರೋಶಿ ಗ್ರಾಮದ ಆಸುಪಾಸಿನಲ್ಲಿ 25.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಗಮೇಶ ವಿಂಡ್ ಟರ್‌ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 25.5 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 3.40 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗೋಲ್ಡನ್ ಹ್ಯಾಚರೀಸ್ ಕಂಪನಿಗೆ ವರ್ಗಾಯಿಸುವಂತೆ ಹಾಗೂ ದಿನಾಂಕ 25–01–2012ರ ಪತ್ರದಲ್ಲಿ ಟರ್ಬೈನ್ ಸಂಖ್ಯೆ GKR-17 ಕ್ಕೆ ಸಂಬಂಧಿಸಿದಂತೆ ಸರ್ವೆ ನಂ. 63ರಲ್ಲಿ ಖಾಸಗಿ ಸ್ಥಳ ಲಭ್ಯವಿಲ್ಲದಿರುವ ಕಾರಣ ಟರ್ಬೈನ್ ಸಂಖ್ಯೆ GKR-01 ರ ಸರ್ವೆ ನಂ. 31 ಸ್ಥಳ ಬದಲಾವಣೆ ಕೋರಿರುವುದನ್ನು ಪರಿಗಣಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಯೋಜನೆಯು ಖಾಸಗಿ ಜಮೀನಿನಲ್ಲಿ ಬರುತ್ತದೆ ಮತ್ತು ಈ ಯೋಜನೆಯನ್ನು ದಿನಾಂಕ: 31–12–2012ಕ್ಕೆ ಅನುಷ್ಠಾನಗೊಳಿಸಲಾಗುವುದೆಂದು ಸಹ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 454 ಎನ್‌ಸಿಇ 2011, ಬೆಂಗಳೂರು, ದಿನಾಂಕ : 05ನೇ ಮಾರ್ಚ್ 2012**

ಮೆ: ಗಮೇಶ ವಿಂಡ್ ಟರ್‌ಬೈನ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಬೆಳಗಾವಿ ಜಿಲ್ಲೆಯಲ್ಲಿ ಅನುಷ್ಠಾನ ಮಾಡಲು ಅನುಮತಿಸಿರುವ 25.5 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 3.40 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೆ: ಗೋಲ್ಡನ್ ಹ್ಯಾಚರೀಸ್ ಕಂಪನಿಯವರಿಗೆ ಟರ್ಬೈನ್ ಸಂಖ್ಯೆ GKR-17ರ ಸ್ಥಳವನ್ನು ಟರ್ಬೈನ್ ಸಂಖ್ಯೆ GKR-01 ರ ಸರ್ವೆ ನಂ. 31ಕ್ಕೆ ಸ್ಥಳ ಬದಲಾವಣೆ ಮಾಡಿ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲಾಗಿದೆ:–

**Schedule**

| Lacation and District | Description |
|---|---|
| Umarni Chikkodi Taluk Belgaum District | The proposed area is situated on the East & South-East of Chikkodi Town and as the reference wind monitoring station Chikkodi. It is a plain area and mostly has agricultural activities. Further, as per the topographic map, the area appears to be private and the general elevation of the area and the same is deleted. The remaining area of the project is held in the following Geographical Co-ordinates:<br>**Latitude :** $16^0$21’56” - $16^0$25’38” N<br>**Longitude :** $74^0$35’0’’ - $74^0$37’24” E<br>**Ridge Peaks :** 680 to 700, m Amsl<br>**Special Note:** Excluding the area alloted to Private firm in the following Geographical Co-ordinates:<br>**Latitude :** $16^0$22’53” - $16^0$23’26” N<br>**Longitude :** $74^0$35’25’’ - $74^0$37’6” E<br>**Ridge peaks :** 772m Amsl **Toposheet :** 47 L/11 |

**Land details of the project**

| Village Name | Taluk & District | MW | Land Sy. No. | No. of WTGs | Extent in land (Acres) | WTG Location No. |
|---|---|---|---|---|---|---|
| Umrani | Chikkodi/ Belgaum | 085 | 31 | 1 No. | 2 Acres | GKR-01 |
| | | 0.85 | 32/2 | 1 No. | 2 Acres | GKR-22 |
| | | 0.85 | 53/1 | 1 No. | 2 Acres | GKR-29 |
| | | 0.85 | 53/1 | 1 No. | 2 Acres | GKR-30 |

1. **ಮೆ: ಗೋಲ್ಡನ್ ಹ್ಯಾಚರೀಸ್** ರವರು ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 2011 ದಿನಾಂಕ: 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. ಸದರಿ ಯೋಜನೆಯನ್ನು ದಿನಾಂಕ 31–03–2012ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು, ಈ ಕುರಿತಂತೆ ಕ್ರೆಡಲ್ ಅಭಿವೃದ್ಧಿದಾರರಿಂದ ಒಪ್ಪಿಗೆ ಪತ್ರ ಪಡೆಯತಕ್ಕದ್ದು (commitment letter)
3. ಮೆ: ಗೋಲ್ಡನ್ ಹ್ಯಾಚರೀಸ್ ರವರು ವೀಲಿಂಗ್ ಮತ್ತು ಬ್ಯಾಂಕಿಂಗ್‌ನ್ನು 3ನೇ ವ್ಯಕ್ತಿಯೊಂದಿಗೆ ಮಾಡಿಕೊಳ್ಳಲು ಅನುಮತಿಸಿದೆ.
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲ್ಕಂಡ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. 845